## ‘ಸಿದ್ಧಗಂಗಾ’ ಚಿರಾಯುವಾಗಲೆಂದು ಹರಸಿ ಹಾರೈಸಿರು
## ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

830 ಶ್ರೀ ಎಂ. ವೆಂಕಟರಾಮಪ್ಪ
ಗೋಕೆರೆ, ದೇವನಹಳ್ಳಿ ತಾ॥
ಬೆಂಗಳೂರು ಜಿಲ್ಲೆ.

831 ಶ್ರೀ ಎಸ್. ನಂಜುಂಡಾರಾಧ್ಯ
ಮರ್ಚೆಂಟ್, ಭಕ್ತರಹಳ್ಳಿ
ಸಿಡ್ಲಘಟ್ಟ ತಾ॥,
ಕೋಲಾರ ಜಿಲ್ಲೆ.

832 ಶ್ರೀ ನರಸಪ್ಪ
S/o ಶ್ರೀ ಮುನಿಶಾಮಪ್ಪ
ತೈಲಗೆರೆ, ದೇವನಹಳ್ಳಿ ತಾ॥
ಬೆಂಗಳೂರು ಜಿಲ್ಲೆ.

833 ಶ್ರೀ ಎಸ್. ಮುನಿಬೈರಪ್ಪ
S/o ಶ್ರೀ ಸುಬ್ಬಣ್ಣ
ದೇವನಹಳ್ಳಿ,
ಬೆಂಗಳೂರು ಜಿಲ್ಲೆ.

834 ಶ್ರೀ ಕೆ. ಬಿ. ಪುಟ್ಟಣ್ಣ
ಜಂಗಮಕೋಟೆ
ಕೋಲಾರ ಜಿಲ್ಲೆ.

835 ಶ್ರೀ ಆರ್. ಕೃಷ್ಣಪ್ಪ S/o
ಶ್ರೀ ಬಿ.ರಂಗಪ್ಪ ಸ್ಟ್ಯಾಂಪ್‌ವೆಂಡರ್
ದೇವನಹಳ್ಳಿ, ಬೆಂಗಳೂರು ಜಿಲ್ಲೆ.

836 ಶ್ರೀ ಜೆ.ಎಂ.ಮುನಿಶಾಮಪ್ಪ
ಅಣ್ಣೇಶ್ವರ
ದೇವನಹಳ್ಳಿ ತಾ॥
ಬೆಂಗಳೂರು ಜಿಲ್ಲೆ.

837 ಶ್ರೀ ಬಿ ಆರ್. ಕರಿಬಸವಾರಾಧ್ಯ
ಭಕ್ತರಹಳ್ಳಿ
ಸಿಡ್ಲಘಟ್ಟ ತಾ॥
ಕೋಲಾರ ಜಿಲ್ಲೆ.

838 ಶ್ರೀ ವಿರಭದ್ರಶಾಸ್ತ್ರಿ
S/o ಶ್ರೀ ಬಿ.ಪಿ. ಶರಭರಾಧ್ಯ
ಬಿದಲೂರು
ದೇವನಹಳ್ಳಿ ತಾ॥
ಬೆಂಗಳೂರು ಜಿಲ್ಲೆ.

839 ಶ್ರೀ ಕೆ.ಜಿ. ಜಯದೇವಒಡೆಯರ್
ಮುದ್ದನಾಯ್ಕನಹಳ್ಳಿ,
ದೇವನಹಳ್ಳಿ ತಾ॥
ಬೆಂಗಳೂರು ಜಿಲ್ಲೆ.

(ಮುಂದುವರಿಯುತ್ತದೆ)

ಮುದ್ರಣ ಕಾಗದದ ತೊಂದರೆಯಿಂದಾಗಿ ಏಪ್ರಿಲ್-ಮೇ ತಿಂಗಳ ಬಸವ ಜಯಂತಿ ವಿಶೇಷ ಸಂಚಿಕೆ ತಡವಾಗಿ ತಲುಪುತ್ತಿದೆ. ಸಹೃದಯ ಓದುಗ ಬಂಧುಗಳು ಸಹಕರಿಸಬೇಕಾಗಿ ಪ್ರಾರ್ಥನೆ.

# ಸಿದ್ಧಗಂಗಾ

ಸಂಪುಟ-೧೭ ಸಂಚಿಕೆ - ೪ - ೫ ಏಪ್ರಿಲ್ - ಮೇ, ೧೯೮೧

  

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

  

ಜ್ಯೋತಿಯಿದ್ದ ಮನೆಯಲ್ಲಿ ಕತ್ತಲೆಯುಂಟೇ ?
ಲಿಂಗವಿದ್ದಂಗದಲ್ಲಿ ಅಜ್ಞಾನವುಂಟೇ ?
ಅಂಗವಿಕಾರವಿಲ್ಲವಾಗಿ ಹೆಂಗಳಿಗೆ ಸೋಲರು,
ಹೊಂಗಳಿಗೆಳಸರು,
ಮಹಾಲಿಂಗೈಕ್ಯರಯ್ಯ ನಿಮ್ಮ ಪ್ರಮಥರು ;
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ,

# ಈ ಸಂಚಿಕೆಯಲ್ಲಿ



## ಚಂದಾದಾರರಲ್ಲಿ ವಿನಂತಿ

1981 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ, ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀ ವಾಣಿ

ಸಂಯಮಿತ ಜೀವನ ಅರ್ಥಾತ್ ಬ್ರಹ್ಮ ಚರ್ಯೆಯು ಸುಖದ ಮೂಲ ಹೇತು. ಅದೇ ಮಾನವನ ಜೀವಿತದ ಸಾರ ಸರ್ವಸ್ವ. ಈ ಬ್ರಹ್ಮಚರ್ಯೆಯು ವ್ಯಾಪಕವಾದ ಅರ್ಥವುಳ್ಳದ್ದಾಗಿದ್ದರೂ ಅತ್ಯವಶ್ಯಕವಾದ ನಿಯಮ ಪರಿಪಾಲನೆಯ ವಿಷಯದಲ್ಲಿ ಜೀವನ ಸತ್ವವಾದ ವೀರ್ಯ ಸಂರಕ್ಷಣೆಯ ವಿಚಾರದಲ್ಲಿ ಬಳಸುವುದು ಒಂದು ಪದ್ಧತಿಯಾಗಿದೆ. ನಮ್ಮ ಭರತ ಖಂಡದಲ್ಲಿ ಪ್ರಾಚೀನ ಕಾಲದಿಂದಲೂ ಬ್ರಹ್ಮಚರ್ಯೆಯ ರಕ್ಷಣೆಗೆ ವಿಶೇಷ ಮಹತ್ವವನ್ನು ಕೊಟ್ಟಿದ್ದಾರೆ. ಬ್ರಹ್ಮಚರ್ಯೆಯಿಂದಲೇ ಮನುಷ್ಯನ ಸರ್ವಶಕ್ತಿಗಳೂ ಶುದ್ಧವಾಗಿ ವಿಕಾಸವನ್ನು ಹೊಂದಿ ವಿಪುಲತೆಯನ್ನು ಪಡೆಯುತ್ತವೆಯೆಂದು ವೇದಗಳು ಸಾರಿವೆ.

" ಬ್ರಹ್ಮ ಚರ್ಯೇಣ ತಪಸಾ ರಾಜಾ ರಾಷ್ಟ್ರಂ ಹಿ ರಕ್ಷತಿ।
ಆಚಾರ್ಯೋ ಬ್ರಹ್ಮ ಚರ್ಯೇಣ ಬ್ರಹ್ಮ ಚಾರಿಣ ಮಿಚ್ಛತೇ॥
ಬ್ರಹ್ಮ ಚರ್ಯೇಣ ತಪಸಾ ದೇವಾ ಮೃತ್ಯುಂ ಅಪಾಧ್ನತ।
ಇಂದ್ರೋಹಿ ಬ್ರಹ್ಮ ಚರ್ಯೇಣ ದೇವೇಭ್ಯಃ ಸ್ವರಾಭರತ್;

ಬ್ರಹ್ಮ ಚರ್ಯ ರೂಪೀತ ತಪಸ್ಸಿನಿಂದಲೇ ರಾಜನು ಪ್ರಜೆಗಳನ್ನು ಸಂರಕ್ಷಣೆ ಮಾಡುತ್ತಾನೆ. ಆಚಾರ್ಯನು ಬ್ರಹ್ಮಚಾರಿಯಾಗಿರ ತಕ್ಕ ಶಿಷ್ಯನನ್ನು ಇಚ್ಛಿಸುತ್ತಾನೆ. ಬ್ರಹ್ಮಚರ್ಯೆಯಿಂದಲೇ ದೇವತೆಗಳು ಮೃತ್ಯುವನ್ನು ಜಯಿಸಿದರು. ಬ್ರಹ್ಮ ಚರ್ಯೆಯಿಂದಲೇ ಇಂದ್ರನು ದೇವತೆಗಳಿಗೆ ಸ್ವರ್ಗ ಸಂಪತ್ತನ್ನು ತಂದು ಕೊಟ್ಟ ಮುಂತಾದ ಅನೇಕ ಪವಿತ್ರ ವಾಣಿಗಳು ಬ್ರಹ್ಮ ಚರ್ಯೆಯ ಹಿರಿಮೆಯನ್ನು ಹೊಗಳಿವೆ.

ಆದ್ದರಿಂದ ಪ್ರತಿಯೊಬ್ಬ ಮನುಷ್ಯನೂ ಸುಖದ ಮೂಲ ಹೇತುವನ್ನು ಕಂಡು ಕೊಳ್ಳಬೇಕಾದರೆ ಅತ್ಯವಶ್ಯಕವಾಗಿ ಬ್ರಹ್ಮಚರ್ಯೆಯನ್ನು ಪಾಲಿಸಬೇಕು.

"ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ



ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

**ಚಂದಾ ವಿವರ**

**ಆಜೀವ ಸದಸ್ಯತ್ವ 151-00 ರೂ**

**ವಾರ್ಷಿಕ ಚಂದಾ 12-00 ರೂ**

ಪ್ರಕಾಶಕರು

'ಸಿದ್ಧಗಂಗಾ' ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ—572104

ತುಮಕೂರು ಜಿಲ್ಲೆ.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ, ವೈಚಾರಿಕ, ಚಿಂತನ ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರೆಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ದೇಶದ ತುಂಬ ಗೊಂದಲಮಯವಾದ ವಾತಾವರಣ ಕವಿದಿದೆ. ಒಂದು ಕಡೆ ಕಾರ್ಮಿಕವರ್ಗದವರ ಅತೃಪ್ತಿಯ ಕೂಗು, ಮತ್ತೊಂದು ಕಡೆ ವರ್ಣ, ವರ್ಗ, ಜಾತಿ ಮುಂತಾದ ಅಂತರಗಳ ವೈಪರೀತಿ. ವಿದ್ಯಾರ್ಥಿಗಳ ಮುಷ್ಕರ, ನಿರುದ್ಯೋಗಿಗಳ ಕೂಗಾಟ, ಅಧಿಕಾರಿಗಳ ಸುಲಿಗೆಯ ವ್ಯಾಪರದ ಸಂಚು, ನಾಯಕರ ಸ್ಥಾನಭದ್ರತೆಯ ಸದವಕಾಶ ಕುರಿತ ಹೋರಾಟ. ಹೀಗಾಗಿ ಎಲ್ಲೆಲ್ಲಿಯೂ ಅಕ್ರಮ ವ್ಯವಹಾರ, ಅನೀತಿ ಯುತ ಬಾಳ್ವೆ, ಕರ್ತವ್ಯಲೋಪ, ಅಪ್ರಾಮಾಣಿಕತೆ, ಕೊಲೆ-ಸುಲಿಗೆಯಿಂದಾಗಿ ಜನ ಜೀವನ ಅಸ್ತವ್ಯಸ್ತವಾಗಿದೆ. ನೆಮ್ಮದಿಯ ಬಾಳಿಗೆ ಭಂಗ ಬಂದು ಅಶಾಂತಿ ತಾಂಡವ ವಾಡುತ್ತಿದೆ ಯೋಜನೆಗಳಿಗೆ ಕೋಟಿಗಟ್ಟಲೆ ಹಣ ಖರ್ಚಾಗುತ್ತಿದ್ದರೂ ನಿರೀಕ್ಷಿತ ವಾದ ದೇಶದ ಅಭಿವೃದ್ಧಿ ಕನಸಿನ ಗಂಟಾಗಿದೆ. ಕಡಿಮೆಯಾಗಬೇಕಾಗಿದ್ದ ಸಮಸ್ಯೆ ಗಳು ದಿನೇದಿನೇ ಅಧಿಕಗೊಂಡು ಭರತಖಂಡದ ಭವಿಷ್ಯ ತೂಗುಯ್ಯಾಲೆಯಾಡುತ್ತಿದೆ. ನಮ್ಮ ದೇಶದ ಆಂತರಿಕ ಸಮಸ್ಯೆಗಳ ಜೊತೆಗೆ ನೆರೆರಾಷ್ಟ್ರಗಳು ಯುದ್ಧಸನ್ನದ್ಧತೆಯ ಸಂಚು ನಿಜವಾದ ದೇಶಪ್ರೇಮಿಗಳಿಗೆ ಕಳವಳವನ್ನುಂಟು ಮಾಡಿದೆ. ಸಾಧುಸಂತರು, ಬುದ್ಧಿಜೀವಿಗಳು, ಜ್ಞಾನಿಗಳು, ತತ್ತ್ವಜ್ಞಾನಿಗಳು ನಿರಂತರ ಚಿಂತನಶೀಲರಾಗಿದ್ದಾರೆ. ಮೂರನೆಯ ಮಹಾಯುದ್ಧದ ವಿಷಗಾಳಿಯ ಅಂಕುರದ ಸುಳಿವು ತಲೆದೋರುತ್ತಿರುವ ಸದ್ಯದ ಪರಿಸ್ಥಿತಿಯಲ್ಲಿ ಜಗತ್ತಿನ ಶಾಂತಿದೂತರು ಭಾರತದ ಧರ್ಮಪರಂಪರೆಯ ಕಡೆ ಕೈದೋರುತ್ತಿದ್ದಾರೆ. ಹೀಗಿರುವಾಗ ಭಾರತೀಯರಾದ ನಾವು ನೈಜವಾದ ಭಾರತೀ ಯತೆಯನ್ನು ಉಳಿಸಿಕೊಳ್ಳಬೇಕು. ಆ ಬಗೆಗೆ ಕರ್ತವ್ಯಶೀಲರಾಗಬೇಕು, ಈ ವಿಷಮ ಪರಿಸ್ಥಿತಿಗೆ ಪರಿಹಾರ ಅಣುಬಾಂಬುಗಳಲ್ಲ, ಅದಕ್ಕೆ ಪರಿಹಾರವಾಗಬಲ್ಲ ಮಹಾಸ್ತ್ರ ಶಾಂತಿಸಂದೇಶ ; ಹಾಗೂ ಧರ್ಮಸಂದೇಶ. ಇಡೀ ವಿಶ್ವಮಾನವ ಪ್ರೇಮ ಮತ್ತು ಮಾನವ ಕಲ್ಯಾಣವನ್ನು ಬೋಧಿಸುವ ಬಸವಸಂದೇಶ, ವ್ಯಕ್ತಿಯ, ಸಮಾಜದ, ದೇಶದ ಹಾಗೂ ವಿಶ್ವದ ಎಲ್ಲ ವಿಧ ಸಮಸ್ಯೆಗಳ ಪರಿಹಾರವು ಭಗವಾನ್ ಬಸವಣ್ಣನವರ ತತ್ತ್ವಾನುಷ್ಠಾನದಿಂದ ಸಾಧ್ಯವಾಗುವುದರಲ್ಲಿ ಯಾರೂ ಅನುಮಾನಪಡಬೇಕಾಗಿಲ್ಲ. ಬಸವಣ್ಣನವರ ತತ್ತ್ವಗಳು ವರ್ಣರಹಿತ, ವರ್ಗರಹಿತ, ಶೋಷಣರಹಿತ ಸಮಾಜ ರಚನೆಗೆ ಪ್ರಚಂಡ ಪ್ರೇರಣೆ, ಪ್ರಬೋಧನೆಯನ್ನು ಒದಗಿಸಿ ವಿಶ್ವಶಾಂತಿಗೆ ಸಾಧಕ ವಾಗುವವೆಂಬ ಭರವಸೆಯನ್ನು ಹೊಂದಬಹುದಾಗಿದೆ.

ಏಪ್ರಿಲ್ 1981

# ನವನೀತ

**ನ ತೇನ ವೃದ್ಧೋ ಭವತಿ ಯೇನಾಸ್ಯ ಫಲಿತಂ ಶಿರಃ ।**
**ಯೋ ವೈ ಯುವಾಪ್ಯಧೀಯಾನಸ್ತಂ ದೇವಾಃ ಸ್ಥವಿರಂ ವಿದುಃ ॥**

—ಮನುಸ್ಮೃತಿ.

ಕೂದಲು ಬೆಳ್ಳಗಾದ ಮಾತ್ರದಿಂದ ಯಾರೂ ಹಿರಿಯನಾಗುವುದಿಲ್ಲ. ಚೆನ್ನಾಗಿ ಓದಿದ, ಕಲಿತ ತರುಣನನ್ನು ಸಹ ದೇವತೆಗಳು ದೊಡ್ಡವನೆಂದು ಗೌರವಿಸುತ್ತಾರೆ.

§§ §§ §§

**ಪಾನಂ ಸ್ತ್ರೀ ಮೃಗಯಾ ದ್ಯೂತಂ ಅರ್ಥದೂಷಣಮೇವ ಚ ।**
**ವಾಗ್ದಂಡಯೋಶ್ಚ ಪಾರುಷ್ಯಂ ವ್ಯಸನಾನಿ ಮಹೀಭುಜಾಮ್ ॥**

—ಸುಭಾಷಿತ ರತ್ನ ಭಾಂಡಾಗಾರ

ಕುಡಿತ, ಸ್ತ್ರೀಯರಲ್ಲಿ ಅತ್ಯಾಸಕ್ತಿ, ಬೇಟೆ, ಜೂಜು, ಹಣವನ್ನು ಅತಿಯಾಗಿ ದುರುಪಯೋಗಮಾಡುವುದು, ಒರಟು ಮಾತು, ಔಚಿತ್ಯ ಮೀರಿದ ದಂಡ ಇವುಗಳು ರಾಜರಲ್ಲಿರಬಾರದ ಕೆಟ್ಟ ಗುಣಗಳು.

§§ §§ §§

**ಗುಣಸಾಮಂತರಂ ಪ್ರಾಯಸ್ತಜ್ಜ್ಞೋ ಜಾನಾತಿ ನೇತರಃ ।**
**ಮಾಲತೀಮಲ್ಲಿಕಾಮೋದಂ ಘ್ರಾಣಂ ವೇತ್ತಿ ನ ಲೋಚನಮ್ ॥**

—ದೃಷ್ಟಾಂತ ಕಲಿಕಾ.

ಗುಣಗಳ ಭೇದವನ್ನು ಗುಣಜ್ಞನಾದ ಪಂಡಿತನು ಬಲ್ಲನೇ ಹೊರತು ಬೇರೆ ಯವನು ತಿಳಿಯಲಾರನು. ಜಾಜಿಹೂ ಮಲ್ಲಿಗೆ ಹೂಗಳ ಸುಗಂಧ ಭೇದವನ್ನು ಮೂಗು ಗೊತ್ತು ಮಾಡುವುದಲ್ಲದೆ, ಕಣ್ಣು ತಿಳಿಯಲಾರದು.

# ಚಿಂತನ

## ನೆರೆಹೊರೆ

— ಟಿ. ಆರ್. ಮಹದೇವಯ್ಯ

ಮನುಷ್ಯ ಸಂಘಜೀವಿ. ಅವನು ಒಂಟಿಯಾಗಿ ಬಾಳಲಾರ. ಪರಸ್ಪರ ಸಹಕಾರದ ಸಹಬಾಳ್ವೆಯು ಮನುಷ್ಯನ ಸುಖಬಾಳ್ವೆಗೆ ಅಗತ್ಯವಾದ್ದರಿಂದಲೇ ಲೋಕದಲ್ಲಿ ಸಮಾಜಕ್ಕೆ ಹೆಚ್ಚಿನ ಮಹತ್ವ ಬಂದಿದೆ. ಒಬ್ಬರು ಮತ್ತೊಬ್ಬರ ಕಷ್ಟ-ಸುಖಗಳಲ್ಲಿ ಪಾಲ್ಗೊಳ್ಳುವ ಪರಿಪಾಠ ಅತ್ಯಂತ ಸ್ವಾಭಾವಿಕವೆಂಬಂತೆ ನಡೆಯುತ್ತಾ ಬಂದಿದೆ. ಈ ಬಗೆಯ ಅನ್ಯೋನ್ಯತೆ ಮಾನವ-ಮಾನವರ ನಡುವೆ ಸಂಕುಚಿತತೆಯನ್ನು ತರ-ತಮ ಭೇದವನ್ನು ನಿವಾರಿಸಿ ಸಹಾನುಭೂತಿ, ಮೈತ್ರಿ, ಪರಸ್ಪರ ಸೌಹಾರ್ದಗಳನ್ನು ನೆಲೆಗೊಳಿಸಿ ಶಾಂತಿ-ಸಮಾಧಾನದ ಜೀವನ ನಡೆಸಲು ಸಹಕಾರಿಯಾಗುತ್ತದೆ.

ನಗರ ಜೀವನಕ್ಕಿಂತ ಗ್ರಾಮೀಣ ಜೀವನದಲ್ಲಿ ಇಂಥ ಸೌಹಾರ್ದ ವಾತಾವರಣ ಹೆಚ್ಚು. ಜಾತಿಮತಸಂಘಗಳು ಅವರ ಸಹಜೀವನಕ್ಕೆ ಅಡ್ಡಿಯಾಗಲಿಲ್ಲ. ಊರವರೆಲ್ಲ ಒಂದೇ ಅವಿಭಕ್ತ ಕುಟುಂಬದವರು, ನೆರೆಹೊರೆಯವರೆಂದರೆ ಅಣ್ಣತಮ್ಮಂದಿರ ಹಾಗೂ ಅಕ್ಕತಂಗಿಯರ ಸಮೂಹವೆಂಬಂತೆ ಕಾಣುತ್ತಿತ್ತು. ಊರೊಟ್ಟಿನ ಕೆಲಸಗಳಲ್ಲಿ ಎಲ್ಲರೂ ಒಗ್ಗೂಡಿಯೇ ಕೆಲಸ ಮಾಡುತ್ತಿದ್ದರು. ಅಂಥ ಅಪೂರ್ವ ದೃಶ್ಯ ನಮಗೆ ಇಂದು ಕಾಣಸಿಗುವುದು ಕಷ್ಟ. ನವನಾಗರೀಕತೆ, ಮಾನವನ ಮನಸ್ಸಿನಲ್ಲಿ ವಿಚ್ಛಿದ್ರಕಾರಕ ರಾಜಕೀಯದ ವಿಷಗಾಳಿ, ಗ್ರಾಮೀಣ ಜೀವನದ ಸ್ವಾಸ್ಥ್ಯವನ್ನು ಕದಡಿದೆ. ದ್ವೇಷಾಸೂಯೆಗಳು ತಾಂಡವವಾಡುತ್ತಿರುವ ಜನರಲ್ಲಿ ಪರಸ್ಪರ ಸಹಕಾರಕ್ಕಿಂತ ಅಸಹನೆ ಬೆಳೆಯುತ್ತಿದೆ.

ನಗರ ಜೀವನದಲ್ಲಂತೂ ಇದು ಇನ್ನು ಘೋರ. ಹತ್ತಾರು ವರ್ಷಗಳು ಅಕ್ಕಪಕ್ಕದಲ್ಲೇ ವಾಸಿಸುತ್ತಿದ್ದರೂ ಅಪರಿಚಿತರಂತೆಯೇ ಇರುತ್ತಾರೆ. ನಗರಗಳಲ್ಲಿ ಸೌಹಾರ್ದ ಸಹಾನುಭೂತಿಗಳಿಲ್ಲದ ಇಂಥ ಬದುಕು ಯಾರಿಗೆ ಪ್ರೀತಿ ? ಪಶು, ಪಕ್ಷಿಗಳ ಬದುಕಿಗಿಂತ ಮಾನವನ ಸಾಮಾಜಿಕ ಜೀವನ ಎಷ್ಟರ ಮಟ್ಟಿಗೆ ಉದಾತ್ತ ?

ಹಳ್ಳಿಗಳಲ್ಲಿ ಹಿರಿಯರು ಬೆಳಿಗ್ಗೆ ಎದ್ದು ಹೋಗುವಾಗ ಎದುರಿಗೆ ಸಿಕ್ಕಿದವರನ್ನು "ಶರಣು ಎದ್ದಿರಾ ?" ಎಂದು ಪ್ರಶ್ನಿಸಿದಾಗ ಅದಕ್ಕೆ ಪ್ರತಿಯಾಗಿ ಅವರು ಎದ್ದೆ ಬನ್ನಿ, ನೀವು ಎದ್ದಿರಾ ಎಂದು ಕುಶಲಪ್ರಶ್ನೆಮಾಡುತ್ತಾರೆ. ಬಹಳ ದಿನಗಳ ನಂತರ ಸಿಕ್ಕುದವರನ್ನು "ಶರಣು, ಚೆನ್ನಾಗಿದ್ದೀರಾ" ಎನ್ನುತ್ತಾರೆ. ಅದಕ್ಕೆ ಅತ ಬನ್ನಿ, ಇಷ್ಟುಮಾತ್ರ, ನೀವು ಹೇಗಿದ್ದೀರಿ ? ಎನ್ನುತ್ತಾನೆ. ಈ ಸಾಂಪ್ರದಾಯಿಕವಾದ ನುಡಿಗಳು ಸೌಹಾರ್ದಯುತವಾದ ವಾತಾವರಣವನ್ನು ಕಲ್ಪಿಸಿ ಹೃದಯ-ಹೃದಯಗಳನ್ನು ಬೆಸೆಯುವ ಸುಸ್ನೇಹದ ಕೊಂಡಿಯಾಗುತ್ತವೆ. ಇದು ಬಿಟ್ಟು ಎದುರಿಗೆ ಬರುವಾಗ ಮುಖ

( 78 ನೇ ಪುಟ ನೋಡಿ )

# ಕ್ಷೇತ್ರ ವಾರ್ತೆ

ಪ್ರಪಂಚದ ಮನುಕುಲದಲ್ಲಿ ಪ್ರಪ್ರಥಮವಾಗಿ ಧರ್ಮದ ಕಲ್ಪನೆ ಮೂಡಿಬಂದದ್ದು ಭಾರತೀಯ ಮಾನವನ ಬುದ್ಧಿಯಲ್ಲಿ. ಆದ್ದರಿಂದ ಧರ್ಮ ಜಾಗೃತಿಯ ವಿಚಾರ ನಮ್ಮ ದೇಶಕ್ಕೆ ಹಳೆಯದರಲ್ಲಿ ಹಳೆಯದು. ಧರ್ಮವು ಮಾನವನ ಸರ್ವಾಂಗೀಣ ಅಭಿವೃದ್ಧಿ ಮತ್ತು ಅಂತಿಮ ಗುರಿಯ ಪವಿತ್ರ ಸಾಧನ. ಧರ್ಮಕ್ಕೆ ಗ್ಲಾನಿ ಒದಗಿದಾಗಲೆಲ್ಲಾ, ಅನೇಕ ಅವತಾರೀ ಪುರುಷರು ಧರ್ಮದೀಪಕರು ಧರ್ಮದ ಪುನರ್ಸಂಸ್ಥಾಪನೆಗೋಸ್ಕರವಾಗಿಯೇ ಜನ್ಮತಳೆದಿದ್ದಾರೆ. ಹೀಗಾಗಿ ಮೇಲಿಂದ ಮೇಲೆ ಧರ್ಮಜಾಗೃತಿಯ ಕಾರ್ಯ ನಡೆಯುತ್ತಾ ಬಂದಿದೆ. ಹಿಂದಿಗಿಂತಲೂ ಅಧಿಕವಾಗಿ ಪ್ರಚಾರಕಾರ್ಯ ನಡೆಯುತ್ತಿದೆ. ವೇದಾಗಮೋಪನಿಷತ್ತು, ಧರ್ಮಶಾಸ್ತ್ರಗಳು ಮೊದಲಿಂದಲೂ ಈ ಕಾರ್ಯ ಮಾಡುತ್ತಾ ಬಂದಿದ್ದರೂ ಅವುಗಳಿಗೆ ಇಂದು ಅಧಿಕವಾದ ನವನವೀನ ವ್ಯಾಖ್ಯಾನ ಮಾಡುವ ಧರ್ಮೋತ್ಥಾನ ಸಂಸ್ಥೆಗಳು ಭರದಿಂದ ಧರ್ಮಜಾಗೃತಿಯ ಕಾರ್ಯವನ್ನು ಮಾಡುತ್ತಿವೆ. ಇಷ್ಟಾದರೂ ಜನತೆಯಲ್ಲಿ ಧರ್ಮದ ಬಗ್ಗೆ ಅಶ್ರದ್ಧೆಯುಂಟಾಗಿ ಧರ್ಮದ ತಳಹದಿಯ ಮೇಲೆ ನಡೆಸುತ್ತಿದ್ದ ಜೀವನ ಆಧಾರ ತಪ್ಪಿದ ಅಂತರಿಕ್ಷದಲ್ಲಿ ತೂಗೂಯ್ಯಾಲೆಯಾಟ ಆಡುತ್ತಿದೆ. ಅಶಾಂತಿ ತಾಂಡವ ನರ್ತನ ಮಾಡುತ್ತಿದೆ. ಹೀಗಾಗಿ ದೇಶದಲ್ಲಿ ಕೊಲೆ, ಸುಲಿಗೆ, ಅತ್ಯಾಚಾರ, ಅನಾಚಾರಗಳು ಅತಿಯಾಗಿವೆ. ಈ ರೀತಿಯ ಅನೀತಿಯುತ ಜೀವನ ನಡವಳಿಕೆಯು ನಿಜವಾದ ಧರ್ಮಾಭಿಮಾನಿಗಳಿಗೆ ಕಳವಳವುಂಟು ಮಾಡಿದೆ. ಇದರ ನಿವಾರಣೆಗೆ ಉಪಾಯವೇನು? ಎಂದು ನಿರಂತರ ಚಿಂತೆಯಾಗಿದೆ. ಚಿಂತಿಸಿ ಕಾರ್ಯೋನ್ಮುಖರಾದ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳು ಅದಕ್ಕೆ ಪರಿಹಾರವನ್ನು ಕಂಡುಕೊಳ್ಳುವ ದಾರಿಯಲ್ಲಿ ಹನ್ನೆರಡನೆಯ ಶತಮಾನದಲ್ಲಿ ಸಕಲ ಜೀವಾತ್ಮರಿಗೆ ಲೇಸನೇ ಬಯಸುವ, ಬಯಸಿದಂತೆ ಜನತೆ ಉಂಡು ತೇಗಿದ, ಸಂಮೃದ್ಧಿಯ ಬಾಳನ್ನು ಸಾಗಿಸಿದ, ಜೀವನ ದರ್ಶನಕ್ಕೆ ಕಾರಣ ಕರ್ತವಾದ ಭಗವಾನ್ ಬಸವಣ್ಣನವರ ತತ್ತ್ವೋಪದೇಶವನ್ನು ಜನತೆಗೆ ಬೋಧಿಸತೊಡಗಿದ್ದಾರೆ. ಆ ಧರ್ಮೋಪದೇಶವು ಇಂದಿನ ದೇಶದ ಎಲ್ಲ ಜನತೆಯ ಸಮಾಜದ ಸಮಸ್ಯೆಗಳ ಪರಿಹಾರಕ್ಕೆ ಏಕೈಕ ಧರ್ಮಸೂತ್ರವೆಂದು ಅನುಭವದಿಂದ ಅರ್ಥಮಾಡಿಕೊಂಡು ಜನತೆಯನ್ನು ಆ ದಿಸೆಯಲ್ಲಿ ಧರ್ಮ ಜಾಗೃತಿಗೊಳಿಸಲು ಗ್ರಾಮಾಂತರ ಬಸವ ಜಯಂತಿ ಉತ್ಸವ ಸಮಾರಂಭಗಳನ್ನು ಆಚರಿಸಲಾಯಿತು. ಈ ಸಮಾರಂಭಕ್ಕೆ ಜನತೆ ತೋರಿಸಿದ ಉತ್ಸಾಹ ನಿಜಕ್ಕೂ ಸಂತೋಷಪಡಬೇಕಾದದ್ದು ಮತ್ತು ಆಶಾಭಾವನೆಯನ್ನು ಮೂಡಿಸುವಂತಾದ್ದು. ನಾನು ಮುಂದು ತಾನು ಮುಂದು ಎಂದು ಭಾಗವಹಿಸುತ್ತಿದ್ದು ಕೆಲವರು ಇಡೀ ಸಮಾರಂಭದ ಬಹಳಷ್ಟು ಭಾಗದ ಖರ್ಚು ವೆಚ್ಚವನ್ನು ವಹಿಸಿಕೊಂಡು ಹಲವು ದಿವಸಗಳು ಈ ಕಾರ್ಯಕ್ಕೆ ತಮ್ಮ ಅಮೂಲ್ಯ

( 3 ನೇ ರಕ್ಷಾಪುಟ ನೋಡಿ )

ಮುಂದುವರಿದ ಲೇಖನ

# ಮರ್ತ್ಯಲೋಕದ ಮಹಾಬೆಳಗು ಉದ್ದಾನಯತೀಶ.

—ಚನ್ನಪ್ಪ ಎರೇಸೀಮೆ

**ಶಿವಯೋಗ ಸಾಧನೆಯಲ್ಲಿ ಉದ್ದಾನಶಿವಯೋಗಿಗಳು :**

ಉದ್ದಾನಶಿವಯೋಗಿಗಳು ಶಿವಯೋಗಸಾಧನೆಯಲ್ಲಿ ಬಹು ಮೇಲ್ಮಟ್ಟದಲ್ಲಿದ್ದರು. ಹುಟ್ಟುಯೋಗಪುರುಷರೇ ಆಗಿದ್ದರು. ಯೋಗದಲ್ಲಿ ಇವರ ಮಟ್ಟವನ್ನು ಮುಟ್ಟಿದ ಶಿವಯೋಗಿಗಳು ವಿರಳ. ತತ್ಫಲವಾಗಿ ಅವರು ಪ್ರತ್ಯಕ್ಷ ಶಿವಸ್ವರೂಪರೇ ಆಗಿದ್ದರು. ಶಿವಶಕ್ತಿ ಅವರಲ್ಲಿ ವಿಶೇಷ ರೀತಿಯಲ್ಲಿ ವಿಚಾರ ಮಾತ್ರದಿಂದಲೇ ಒಡಮೂಡಿತ್ತಾಗಿ ಪರುಷಶಕ್ತಿ ಅವರಿಗೆ ಕೈಗೂಡಿತ್ತು. ಇಚ್ಛಾಮಾತ್ರದಿಂದಲೇ ಮಠದ ಕಾರ್ಯಗಳು ಬೃಹತ್ಪ್ರಮಾಣದಲ್ಲಿ ಸಾಗುತ್ತಿದ್ದವು. ಈ ಶಿವಯೋಗಾಭ್ಯಾಸಕ್ಕೆ ಚಿತ್ತ ವೃತ್ತಿ ನಿರೋಧಕ್ಕೆ ಅವರು ಪ್ರವೇಶ ಮಾಡುತ್ತಿದ್ದ ಗುಹೆಗಳು ಎರಡು. ಒಂದು ಬೆಟ್ಟದ ಮೇಲಿರುವ ಜಂಗಮ ಪಾದತೀರ್ಥವಿರುವ ಸಿದ್ಧಗಂಗಾ ಅಮ್ಮನವರ ಗವಿ. ಎರಡನೆಯದು ರಾಮಲಿಂಗೇಶ್ವರರ ಬೆಟ್ಟ (ರಾಮಗಿರಿ) ದಲ್ಲಿರುವ ದೊಡ್ಡಸಿದ್ದಪ್ಪನ ಗವಿ. ಸಿದ್ಧಗಂಗಾ ಬೆಟ್ಟದ ಮೇಲಿರುವ ಗವಿಯಲ್ಲಂತೂ ಆಗಾಗ ಪ್ರವೇಶಮಾಡಿ ಅನೇಕ ಘಂಟೆಗಳ ಕಾಲ ಕುಳಿತು ಹೊರಗೆ ಬರುತ್ತಿದ್ದರು. ಅವರು ಗವಿಯನ್ನು ಪ್ರವೇಶ ಮಾಡಿದ ಮೇಲೆ ಹೊರಗೆ ಬರುವವರೆಗೆ ಅತ್ತ ಯಾರು ಸುಳಿಯುತ್ತಿರಲಿಲ್ಲ. ಅಲ್ಲಿ ಅವರ ಸಾಧನೆ ಸಿದ್ಧಿಗಳನ್ನು ಹೇಗೆ ಪಡೆಯುತ್ತಿದ್ದರೆಂಬ ವಿವರಗಳು ಮಾತ್ರ ಯಾರಿಗೂ ಗೊತ್ತಾಗುತ್ತಿರಲಿಲ್ಲ. ಆಮೇಲೆ ಇವರು ಗಾಢವಾದ ಯಾವುದೇ ವಿಷಯ ಕುರಿತು ಯೋಚಿಸುವಾಗ ಈ ಗವಿಯ ಹೊರಭಾಗದಲ್ಲಿರುವ ಒಂದು ಕಲ್ಲುಬಂಡೆಯ ಮೇಲೆ ಕುಳಿತುಕೊಂಡು ಬಿಡುತ್ತಿದ್ದರಂತೆ[21]. ಈ ಕಲ್ಲುಬಂಡೆಯ ಸ್ಥಾನ ಅವರ

21) ಈ ಕಲ್ಲು ಬಂಡೆ ಯಾವುದೆಂದು ಈಗ ಗೊತ್ತಾಗುತ್ತಿಲ್ಲ. ಸೂರ್ಯೋದಯವಾದೊಡನೆ ಈ ಬಂಡೆಯ ಮೇಲೆ ಪ್ರಥಮತಃ ಸೂರ್ಯಕಿರಣಗಳು ಬೀಳುತ್ತಿದ್ದವೆಂದೂ ಅದು ಅವರಿಗೆ ಪರುಷಗಟ್ಟಿಯ ಸ್ಪರ್ಶವಾಗಿತ್ತೆಂದೂ ಸಾಮಾನ್ಯವಾಗಿ ಈಗ ತಿಳಿಯಲಾಗುತ್ತದೆ. ಶ್ರೀ ಮಠದ ದಾಸೋಹಕ್ಕೆ ಹಣಕಾಸಿನ, ಪಡಿಪದಾರ್ಥಗಳ ಕೊರತೆಯಾದುದು ಅನುಭವಕ್ಕೆ ಬಂದರೆ ಈ ಕಲ್ಲು ಬಂಡೆಯಮೇಲೆ ಹೋಗಿಕುಳಿತು ಬಿಟ್ಟರೆ ಕೊರತೆಯಾಗಿದ್ದ ವಸ್ತುಗಳು ತಾವಾಗಿಯೇ ಬಂದು ಭಕ್ತರ ಮೂಲಕ ದಾಸೋಹಕ್ಕೆ ಸಂದಾಯವಾಗುತ್ತಿದ್ದುವೆಂದೂ ಉದ್ದಾನಸ್ವಾಮಿಗಳವರನ್ನು ಅತ್ಯಂತ ಸಮೀಪದಲ್ಲಿ ಕಂಡು ಅವರ ಅನುಗ್ರಹಕ್ಕೆ ಪಾತ್ರರಾಗಿ ಈಗ ಹಾಲಿ ಇರುವ ಕರ್ಸಕುಪ್ಪೆ ಛೇರ್ಮನ್ ರೇವಣ್ಣನವರು ನನಗೆ ತಿಳಿಸಿದರು.

ಯೋಚನೆ ಯೋಜನೆಗಳಿಗೆ ಸೂಕ್ತ ಪರಿಹಾರವನ್ನು ಒದಗಿಸುತ್ತಿತ್ತೆಂದು ತಿಳಿದು ಬರುತ್ತದೆ. ಆ ಕಲ್ಲುಬಂಡೆಯ ಮೇಲೆ ಅವರು ಹೋಗಿ ಕುಳಿತರೆ ಅವರ ಸನಿಹಕ್ಕೆ ಯಾರೂ ಹೋಗುತ್ತಿರಲಿಲ್ಲವಂತೆ. ಅಲ್ಲಿ ಅವರೊಬ್ಬರೇ ಹೋಗಬೇಕು. ಕ್ಷೇತ್ರಾಧಿಪತಿಯಾದ ಸಿದ್ಧಲಿಂಗೇಶ್ವರರು ಇವರೊಡನೆ ಪ್ರತ್ಯಕ್ಷ ಮಾತನಾಡುತ್ತಿದ್ದರೆಂದೇ ಇಂದಿಗೂ ಜನರ ಗ್ರಹಿಕೆ. ವಿಶೇಷ ಸಂದರ್ಭಗಳಲ್ಲಿ ಸಿದ್ಧಲಿಂಗೇಶ್ವರ ಸ್ವಾಮಿಯ ಹತ್ತಿರ ಉದ್ದಾನ ಶಿವಯೋಗಿಗಳು ಹೋಗಿ ಕುಳಿತುಬಂದ ನಂತರವೇ ಮುಂದಿನ ಕಾರ್ಯಾರಂಭದ ವಿಷಯದಲ್ಲಿ ತೀರ್ಮಾನ ಕೈಕೊಳ್ಳುತ್ತಿದ್ದರು. ಅಲ್ಲಿ ಅವರಿಗೆ ಸಿದ್ಧಲಿಂಗೇಶ್ವರರು ಹೇಗೆ ಸೂಚಿಸುತ್ತಿದ್ದರೋ ಇವರು ಹೇಗೆ ತಿಳಿದುಕೊಳ್ಳುತ್ತಿದ್ದರೋ ಎರಡೂ ರಹಸ್ಯವಾದವುಗಳೇ.

ಇವರ ಯೋಗಸಿದ್ಧಿಗೆ ಕಾರಣವಾಗುತ್ತಿದ್ದ ಇನ್ನೊಂದು ಗವಿ ದೊಡ್ಡಸಿದ್ದಪ್ಪನ ಗವಿ ಮಠದಿಂದ ಸುಮಾರು 2-2¼ ಮೈಲು ದೂರದಲ್ಲಿ ರಾಮಲಿಂಗನ ಬೆಟ್ಟದ ಮಧ್ಯದಲ್ಲಿ ಇದೆ. ಇಲ್ಲಿಗೆ ಆಗಾಗ ಒಬ್ಬರೇ ಹೋಗುತ್ತಿದ್ದರು. ದುರ್ಗಮವಾದ ಅರಣ್ಯ ಮಧ್ಯದಲ್ಲಿರುವ ಈ ಗವಿಗೆ ರಾತ್ರಿ, ಹಗಲು ಎನ್ನದೆ ತಮಗೆ ಇಚ್ಛೆ ಬಂದಾಗಲೆಲ್ಲ ಹೋಗುತ್ತಿದ್ದರು. ಅನೇಕ ಸಲ ಅಮಾವಾಸ್ಯೆಯ ಕಗ್ಗತ್ತಲೆಯಲ್ಲಿ ಒಬ್ಬರೇ ಹೋಗುತ್ತಿದ್ದರು. ಹಗಲು ಪ್ರವೇಶಮಾಡಲು ಅವಶ್ಯಕವಾದ ಗವಿಯಲ್ಲಿ ರಾತ್ರಿಯ ಕಗ್ಗಾವಳದಲ್ಲಿ ಒಬ್ಬರೇ ಹೇಗೆ ಪ್ರವೇಶ ಮಾಡುತ್ತಿದ್ದರೆಂಬುದನ್ನು ಈಗ ಅವನ್ನು ಪ್ರತ್ಯಕ್ಷ ಕಂಡವರು ಊಹಿಸುವುದು ಕಷ್ಟವೆನಿಸುತ್ತದೆ. ಮಠದಿಂದ ಶ್ರೀಗಳವರು ಒಬ್ಬರೇ ಹೊರಟು ಬಂದರೆಂದು ತಿಳಿದ ಪಕ್ಕದ ಹಳ್ಳಿಯವರು ಪಂಜು ಲಾಟೀನುಗಳ ಬೆಳಕನ್ನುಂಟುಮಾಡಿಕೊಂಡು ಬಂದರೆ ಅವರನ್ನೆಲ್ಲ ಹಿಂದಕ್ಕೆ ಕಳುಹಿಸಿಬಿಡುತ್ತಿದ್ದರು. ಶ್ರೀಗಳವರು ಬೆಟ್ಟವನ್ನು ಏರುತ್ತ ಹೊರಟರೆಂದರೆ ಅವರ ಮುಂಭಾಗದಲ್ಲಿ ಎರಡು ಪಂಜುಗಳು ಮುಂದೆ ಮುಂದೆ ಹೋಗುತ್ತಿದುದ್ದನ್ನು ಕಂಡವರು ಆ ಹಳ್ಳಿಯಲ್ಲಿ ಇದ್ದಾರೆ. [22]

ಅಷ್ಟ ಸಿದ್ಧಿಗಳನ್ನು ಶಿವಯೋಗಿಗಳು ಪಡೆದಿದ್ದರೆಂಬುದಕ್ಕೆ ಇದು ಪ್ರತ್ಯಕ್ಷ ನಿದರ್ಶನ. ಹೊರಟು ಹೋಗಿ ಚಿಕ್ಕಸಿದ್ಧಪ್ಪನ ಗವಿಯ ಮುಂದುಗಡೆ ಹಾಯ್ದು,

22) ನಾವು ಈ ಗವಿಯಿರುವ ಸ್ಥಳದ ತಳಭಾಗದಲ್ಲಿರುವ ಹಳ್ಳಿಯವರ ನೆರವಿನಿಂದ ಅದನ್ನು ನೋಡಿ ಛಾಯಾಚಿತ್ರಗಳನ್ನು ತೆಗೆದುಕೊಂಡು ಬರಬೇಕೆಂದು ಹೋದೆವು, ಹಿಂದೆ ಉದ್ದಾನ ಸ್ವಾಮಿಗಳವರು ಗವಿಯನ್ನು ಪ್ರವೇಶಿಸಲು ಬರುವಾಗ ಅವರ ನೆರವಿಗೆಂದು ಸ್ವಯಂವಾಗಿ ಬರುತ್ತಿದ್ದ ಅದಿಕರ್ನಾಟಕ ವೃದ್ಧರೊಬ್ಬರು ಈಗಲೂ ನಮಗೆ ದಾರಿ ತೋರಿಸಲು ಬಂದರು. ಅವರು ನಮ್ಮನ್ನು ಕರೆದೊಯ್ದು ಗವಿಯನ್ನು ತೋರಿಸಿ ಉದ್ದಾನ ಸ್ವಾಮಿಗಳು ಇಲ್ಲಿಗೆ ಬರುತ್ತಿದ್ದಾಗ ನಡೆಯುತ್ತಿದ್ದ ಅದ್ಭುತ ಘಟನೆಗಳನ್ನು ಕಥೆ ಮಾಡಿ ವಿವರಿಸಿದರು. ಆಗಿನ ಆ ಸನ್ನಿವೇಶಗಳನ್ನು ನೆನೆಸಿಕೊಂಡರೆ ಈಗಲೂ ಮೈ ನವಿರೇಳುತ್ತದೆ. ಎಂದು ತನ್ನ ನವಿರೆದ್ದ

ಅಲ್ಲಿಂದ ಒಂದು ಫರ್ಲಾಂಗ್ ದೂರದಲ್ಲಿರುವ ದೊಡ್ಡಸಿದ್ಧಪ್ಪನ ಗವಿಯ ಹೊರಭಾಗ ದಲ್ಲಿರುವ ಒಂದು ಚಿಕ್ಕ ಕಲ್ಯಾಣಿಯಲ್ಲಿ ಮುಖಮಾರ್ಜನೆ ಮಾಡಿಕೊಂಡು ಅತ್ಯಂತ ಗಂಭೀರವಾದ ದೊಡ್ಡಸಿದ್ಧಪ್ಪನ ಗವಿಯನ್ನು ಪ್ರವೇಶಿಸುತ್ತಿದ್ದರು. [23] ಅಲ್ಲಿ ಇಚ್ಛೆ ಬಂದಷ್ಟು ಸಮಯ ಕುಳಿತು ಬರುತ್ತಿದ್ದರು. ಅವರ ಅಲ್ಲಿನ ಸಾಧನೆ ಸಿದ್ಧಿಗಳೇನೆಂಬುದು ಯಾರಿಗೂ ಗೊತ್ತಾಗುತ್ತಿರಲಿಲ್ಲ. ಯಾರಾದರೂ 'ಒಳಗೆ ತಾವು ಏನು ಮಾಡಿ ಬಂದಿರಿ' ಎಂದು ಕೇಳಿದರೆ ಶ್ರೀಗಳವರು ನಗುತ್ತ 'ಅಲ್ಲಿ ನಮ್ಮವರು ಇದ್ದಾರೆ. ಮಾತನಾಡಿಕೊಂಡು ಬರುತ್ತೇನೆ' ಎಂದುಬಿಡುತ್ತಿದ್ದರು. 'ನಮಗೂ ಅವರನ್ನು ತೋರಿಸುತ್ತೀರಾ ?' ಎಂದರೆ-'ಅವರೆಲ್ಲ ನಿಮ್ಮ ಕಣ್ಣಿಗೆ ಕಾಣುವುದಿಲ್ಲ' ಎಂದು ಹೇಳಿಬಿಡುತ್ತಿದ್ದರಂತೆ, ನಗು ನಗುತ್ತ. ನಿಜವಾಗಿಯೂ ಶ್ರೀಗಳವರ ವರ್ತನೆಗಳಲ್ಲಿ ಇದೊಂದು ರೋಮಾಂಚಕಾರಿಯಾದ ನಡೆ. ಹಗಲು ಹೊತ್ತು ಹೋಗಲಿ, ರಾತ್ರಿಯ ಹೊತ್ತು ಒಬ್ಬರೇ ಹೋಗುವುದೆಂದರೇನು? ಆ ಗಂಭೀರ ಗವಿಯಲ್ಲಿ ಹಾವೇನೋ, ಚೇಳೇನೋ; ಹಿಂಸ್ರ ಪಶುಪಕ್ಷಿಗಳೇನು ಹೊಕ್ಕಿರುವುವೋ ಎಂದು ನಮಗೆ ಭಯ. ಆದರೆ ಶ್ರೀಗಳವರಿಗೋ ಅದೇತರ ಭಯವೂ ಇಲ್ಲ. ಶಿವಯೋಗದಲ್ಲಿ ಒಂದು ಹಂತ ಏರಿದಮೇಲೆ ಮೃಬಾಧಾ ನಿವಾರಣೆ ಯಾವುದೆಂದು ಯೋಗಶಾಸ್ತ್ರದ ವಿವರಣೆ. ಈ ವಿಷಯವನ್ನು ಹಿಂದೆಯೇ ಸ್ಥೂಲವಾಗಿ ಹೇಳಿದೆ. ಈ ಸಿದ್ಧಿಯು ಉದ್ದಾನ ಸ್ವಾಮಿಗಳವರಿಗೆ ಅವರು ಇನ್ನೂ ಪೂರ್ವಾಶ್ರಮ ಸ್ಥಿತಿಯಲ್ಲೇ ಉಂಟಾಗಿತ್ತೆಂದು ಅನೇಕರ ಹೇಳಿಕೆ. ಶಿವಯೋಗಿಗಳವರ ಧೈರ್ಯ, ಸ್ಥೈರ್ಯ ನಿರ್ಭಯಾದಿಗಳು ಅವರು ಏರಿದ ಶಿವಯೋಗದ ಫಲವಾಗಿ ಲೋಕಕ್ಕೆ ಪವಾಡಗಳಾಗಿ ಕಾಣುತ್ತಿದ್ದವು. [24] ಹೀಗೆ ಬಾಲ್ಯದಿಂದಲೂ ಇವರ ಜೀವನವೆಲ್ಲವೂ ಲೋಕ ಸಾಮಾನ್ಯ ವ್ಯವಹಾರಕ್ಕಿಂತ ಭಿನ್ನವಾಗಿಯೇ ಇದ್ದು ಇವರೊಬ್ಬ ಅತ್ಯದ್ಭುತ ಚೇತನದ, ಅಘಟಿತ ಘಟನಾ ಸಮರ್ಥ್ಯದ ಮಹಾ ವ್ಯಕ್ತಿಗಳಾಗಿ ಕಾಣುತ್ತಿದ್ದರು. ಕೆಲವು ಇವರ ಜೀವನದಲ್ಲಿ ನಡೆಯಿತೆನ್ನಲಾದ ಅದ್ಭುತ ಪ್ರಸಂಗಗಳನು ಮುಂದಿನ ಪುಟದಲ್ಲಿ ನೋಡಬಹುದು

---

...ಯನ್ನು ತೋರಿಸಿದನು. ನಾವು ಗವಿಯ ಸಮೀಪಕ್ಕೆ ಹೋಗಿ ನೋಡಿದಾಗ ನಮಗೆ ...ಗೆ ಹೋಗಲು ಭಯವಾಯಿತು ನಾಲ್ಕೈದು ಜನಗಳು ಒಬ್ಬರಿಗೊಬ್ಬರು ಟಾರ್ಚ್, ...ಟೀನು ಹಿಡಿದುಕೊಂಡು ಧೈರ್ಯದ ಮಾತನಾಡಿಕೊಂಡು ಒಳಗೋದೆವು ಕಡಿದ ಕಲ್ಲಿನ ...ಗಿಲುವಾಡದ ಆ ಗವಿಯನ್ನು ಮೊದಲು ಸ್ವಲ್ಪ ದೂರ, ತೆವಳಿಕೊಂಡು ಹೋಗಬೇಕು, ...ಒಂದು ಬಾಗಿಲು ಅದನ್ನು ದಾಟಿದೊಡನೆಯೇ ಬಸವ; ಅದರ ಮುಂದೆ ಇನ್ನೊಂದು ...ದ ಬಾಗಿಲು; ಅದನ್ನೂ ದಾಟಿದಮೇಲೆ ಶಿವಲಿಂಗ. ಅದರ ಸುತ್ತಲೂ ವಿಶಾಲ ಬೈಲು. ...ಒಂದು ಗಂಭೀರ ದೃಶ್ಯ. ಇಲ್ಲಿಯೇ ಇರುವ ಒಂದು ಸ್ಥಳದಲ್ಲಿ ಶಿವಯೋಗಿಗಳು ಗಂಟೆ ...ಲೆ, ದಿನಗಟ್ಟಲೆ, ಕುಳಿತುಬಿಡುತ್ತಿದ್ದರು.

...) ಎಂದೂ ಛತ್ರದ ಈ ಚಿಲುಮೆಗೆ ಈಗಲೂ ದೊಡ್ಡ ಸ್ವಾಮಿಗಳ ಹೊಂಡ ಎನ್ನುತ್ತಾರೆ. ಹೆಸರು ಹೇಗೆ ಬಂತೆಂಬುದು ಗೊತ್ತಾಗುತ್ತಿಲ್ಲ.

ಈ ಪೂರ್ವದಲ್ಲಿ ಇವರು ಸಿದ್ಧಲಿಂಗೇಶ್ವರರೊಡನೆ ಮಾತನಾಡುತ್ತಿದ್ದರೆಂದು ಹೇಳಿದೆನಷ್ಟೆ. ಇದಕ್ಕೊಂದು ಪ್ರಸಂಗ ನಡೆದುದನ್ನು ಈ ಸಮಯದಲ್ಲಿ ಜ್ಞಾಪಿಸಬಹುದು. ತಮ್ಮ ಉತ್ತರಾಧಿಕಾರಿಗಳನ್ನಾಗಿ ಈಗಿನ ಶ್ರೀ ಶಿವಕುಮಾರ ಸ್ವಾಮಿಗಳನ್ನಾರಿಸುವ ಪೂರ್ವದಲ್ಲಿ 'ಮರುಳಾರಾಧ್ಯ' ಎಂಬುವರನ್ನು ಆರಿಸಿಕೊಂಡಿದ್ದರು. ಅವರು ತೀವ್ರ ಅನಾರೋಗ್ಯದಿಂದ ಮರಣೋನ್ಮುಖರಾದರು. ಸಾವು ಬದುಕುಗಳೊಡನೆ ಸೆಣಸುವ ಸಮಯ. ಉದ್ಧಾನ ಶಿವಯೋಗಿಗಳು ಹೊಯ್ದಾಟಕ್ಕೆ ಒಳಗಾದರು.[25] ಈ ಸಮಯದಲ್ಲಿ ಉದ್ದಾನ ಶಿವಯೋಗಿಗಳು ಸಿದ್ಧಲಿಂಗೇಶ್ವರರ ದರ್ಶನಕ್ಕೆ ಹೋದರು.[26] ಆಗಿನ ಅವರ ಮುಖಮುದ್ರೆ ವಿಲಕ್ಷಣವಾಗಿತ್ತು. ಅವರು ಈ ಲೋಕದಲ್ಲಿ ವ್ಯವಹರಿಸುವವರಂತೆಯೇ ಕಾಣುತ್ತಿರಲಿಲ್ಲ. ಉದ್ವೇಗ, ಆವೇಗಗಳಿಂದ ಕೂಡಿದ ಮುಖ ಮುದ್ರೆಯ ಆಗಿನ ಅವರೊಡನೆ ಮಾತನಾಡುವ ಧೈರ್ಯ ಯಾರಿಗೂ ಇರಲಿಲ್ಲ. ಅವುಗೆಗಳನ್ನು ಪಾದದಲ್ಲಿ ಮೆಟ್ಟಿಕೊಂಡು ವೇಗ ವೇಗವಾಗಿ ಬೆಟ್ಟದ ಮೆಟ್ಟಲನೇರಲು ತೆರಳುತ್ತಿದ್ದರು. ಬೆಟ್ಟದ ಮೆಟ್ಟಲಿನ ಸಮೀಪಕ್ಕೆ ಹೋಗುತ್ತಿದ್ದಂತೆ ಥಟ್ಟನೆ ನಿಂತರು. ಏನನ್ನೋ ಅವಲೋಕಿಸುವವರಂತೆ ನಿಂತು — ಇಲ್ಲಿ ಬಿಡು,........ ಏನು ? ಬೇಡವೆ ? ಏಕೆ ಬೇಡ? ಇದ್ದರೇನು? ........ ಹೋ ! ಹೋ ! ಒಯ್ಯಲೇಬೇಕೆ ? ಹಾಗಾದರೆ ತೆಗೆದುಕೊಂಡು ಹೋಗು, ತೆಗೆದುಕೊಂಡು ಹೋಗಲೇಬೇಕೆಂದರೆ ತಡೆಯಲು ನಾನಾರು ? ಹೂಂ.... ಹೋಗು

---

24) ಶಿವಯೋಗಿಗಳು ಪವಾಡವನ್ನು ಮೆರೆದು ಲೋಕ ಜೀವನದಲ್ಲಿ ಅದ್ಭುತ ಪ್ರದರ್ಶನ ಮಾಡಬೇಕೆಂಬ ಮನೋಭಾವದವರೇನೂ ಅಲ್ಲ. ಆದರೆ ಅವರ ಜೀವನದುದ್ದಕ್ಕೂ ಆ ಘಟನೆಗಳು ಲೋಕಕ್ಕೆ ಕಾಣಿಸಿಕೊಳ್ಳುತ್ತಿದ್ದವು. ಯಾರಾದರೂ ತಮ್ಮ ಯಾವುದೇ ಕರ್ತವ್ಯದ ಬಗೆಗೆ ಅಪ್ಪಣೆ ಕೇಳಲು ಹೋದರೆ ಬೇಡವೆಂದರೆ ಬೇಡ ಆಗಲಿ ಎಂದರೆ ಎಲ್ಲವೂ ಸೂಸರವನ್ನೆತ್ತಿದಷ್ಟು ಸುಗಮ. ಶ್ರೀಗಳವರು ಅನ್ಯ ಹೃದಯವನ್ನು ಬಲ್ಲವರಾಗಿದ್ದರೆಂದು ಎಷ್ಟೋ ಜನ ಹೇಳುತ್ತಾರೆ. ಅವರು ತಾವು ಏರುವ ಪಂಚ ಕಲ್ಯಾಣ ಕುದುರೆಯನ್ನೇರಿದ ಮೇಲೆ, ಏರುವ ಪೂರ್ವದಲ್ಲಿಯೇ ಅದರ ಚರ್ಯೆಯನ್ನು ಕಂಡೊಡನೆ ಕಾರ್ಯದ ಫಲಾಫಲಗಳನ್ನು ಹೇಳಿಬಿಡುತ್ತಿದ್ದರು. ಕಾರ್ಯ ವಿಫಲವೆಂಬ ಚರ್ಯೆಯನ್ನು ಕುದುರೆಯು ತೋರಿಸಿದರೆ ಕಾರ್ಯಕ್ರಮವನ್ನು ಮೊಟಕುಗೊಳಿಸಿಬಿಡುತ್ತಿದ್ದರು

25) ಈ ಘಟನೆ ನಡೆದುದು 16—1—1930ನೆಯ ಇಸವಿಯಂದು

26) ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಶಿವಯೋಗೀಶ್ವರರು ಬೆಟ್ಟದ ಮೇಲೇರಿ ಸಿದ್ಧಲಿಂಗೇಶ್ವರರ ದರ್ಶನ ತೆಗೆದುಕೊಂಡು ಬರುವ ಪದ್ಧತಿ. ಅಲ್ಲಿ ಹೋಗಿ ಕೆಲಹೊತ್ತು ಅಮ್ಮನವರ ಗವಿಯನ್ನು ಪ್ರವೇಶಿಸಿ ಕುಳಿತು ಹೊರಬರುತ್ತಿದ್ದರು. ಇದನ್ನು ಜನಗಳು ಸಿದ್ಧಲಿಂಗೇಶ್ವರರೊಡನೆ ಮಾತನಾಡಿ ಬಂದರೆಂದು ಭಾವಿಸುತ್ತಿದ್ದರು. ಬಹುಶಃ ಮಾತನಾಡಿಯೂ ಬರುತ್ತಿರಬಹುದು. ಜನ ಸಾಮಾನ್ಯಕ್ಕೆ ಅವಿಷಯ ಅರ್ಥವಾಗುವುದು ಕಷ್ಟ: ಆ ಭಾಷೆಯೂ ಅರ್ಥವಾಗುವುದೂ ಕಷ್ಟ. ಅದು ಭಾಷೆಯಿಲ್ಲದ ಭಾಷೆ. ಅರ್ಥವಿಲ್ಲದ ಅರ್ಥ, ವಿಶೇಷಾರ್ಥ.

ಹೋಗು. ಆಗಲಿ! ಹೀಗೆ ಒಬ್ಬರೇ ಗುಣುಗುಟ್ಟಿಬಿಟ್ಟರು. ಇತ್ತ ಮರುಳಾರಾಧ್ಯರು ಲಿಂಗೈಕ್ಯರಾದರು.[27] ಶ್ರೀಗಳವರು ನೇರವಾಗಿ ಸಿದ್ಧಲಿಂಗೇಶ್ವರರ ಸನ್ನಿಧಿಗೆ ಹೋಗಿ ಅನೇಕ ಗಂಟೆಗಳ ಕಾಲ ಅಲ್ಲಿ ಒಬ್ಬರೇ ಶಿವಯೋಗ ಸಮಾಧಿಯಲ್ಲಿ ಕುಳಿತರು. ಮುಂದೆ ಶ್ರೀ ಮಠದ ಉತ್ತರಾಧಿಕಾರಿಗಳಾರೆಂಬುದರ ಚಿತ್ರವನ್ನು ಆಗಲೇ ಕಂಡುಕೊಂಡೇ ಬಂದರು. ಆ ಸಮಾಧಿ ಸಿದ್ಧತೆಯಲ್ಲಿ ಅವರ ಕಣ್ಣೆದುರಿಗೆ ನಿಂತವರು ವೀರಾಪುರದ 'ಶಿವಣ್ಣ' ಎಂಬುವರು. ಆ ಕೂಡಲೆ ತಮ್ಮ ಅನುಗ್ರಹವನ್ನು ಶಿವಣ್ಣನ ಮೇಲೆ ಸಂಕಲ್ಪ ಮಾತ್ರದಿಂದ ಚೆಲ್ಲಿದರು. ಆದಿನ ಬೆಂಗಳೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ಶಿವಣ್ಣನವರೂ ಉದ್ದಾನ ಶ್ರೀಗಳವರ ಪ್ರಬಲ ಸಂಕಲ್ಪದ ಕಟ್ಟಿಗೋಸ್ಕರವಾಗಿ ಮಠಕ್ಕೆ ಧಾವಿಸಿ ಬಂದರು. ಬಂದು ಮರುಳಾರಾಧ್ಯರ ಸಮಾಧಿ ಕ್ರಿಯೆಯಲ್ಲಿ ಭಾಗವಹಿಸಿದರು ಮಾನಸಿಕವಾಗಿ ಶ್ರೀ ಕ್ಷೇತ್ರದ ಉತ್ತರಾಧಿಕಾರಿಯಾಗಿಬಿಟ್ಟರು.[28] ಉದ್ದಾನ ಶಿವಯೋಗಿಗಳವರ ಶಿವಯೋಗ ಶಕ್ತಿಯ ಅದ್ಭುತ ನಿದರ್ಶನಗಳಿಗೆ ಬೇರೆ ಇನ್ನೇನು ಬೇಕು? ಇಂಥ ರಹಸ್ಯಗಳೇ ನಿರ್ಮಾಣಯಾಸಿಥಿಯಾಗಿದ್ದ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರರೊಡನೆ ಉದ್ದಾನ ಶಿವಯೋಗಿಗಳು ಮಾತನಾಡುತ್ತಿದ್ದರೆಂದೂ ಅವರ ಅಪ್ಪಣೆಯಾದಂತೆ ವರ್ತಿಸುತ್ತಿದ್ದರೆಂದೂ ಹೇಳುವ ಆಖ್ಯಾಯಿಕೆಗಳಿಗೆ ನಿದರ್ಶನಗಳು. ವೀರಾಪುರದ ಶಿವಣ್ಣನವರು ಶ್ರೀ ಸಿದ್ಧಗಂಗಾ ಕ್ಷೇತ್ರದ ಉತ್ತರಾಧಿಕಾರಿಗಳಾಗುತ್ತಾರೆಂಬುದು ಯಾರ ಕನಸು ಮನಸ್ಸಿನಲ್ಲೂ ಇರಲಿಲ್ಲ. ಶಿವಣ್ಣನವರಲ್ಲಿ ವಿಶೇಷ ಸಲಿಗೆಯೂ ಉದ್ದಾನ ಶಿವಯೋಗಿಗಳವರಿಗೆ ಮೊದಲು ಇರಲಿಲ್ಲ. ಆದರೆ ಶಿವಣ್ಣನವರು ಉದ್ದಾನ ಶಿವಯೋಗಿಗಳ ಅದ್ಭುತ ಶಿವಯೋಗ ಸಂಪತ್ತಿಗೆ ಮಾರು ಹೋಗಿದ್ದರೆಂದೂ ಅವರನ್ನು ಕಂಡರೆ ಭಯಗೊಂಡು ನಡುಗುತ್ತಿದ್ದರೆಂಬುದಂತೂ ಸತ್ಯ. ಶಿವಣ್ಣನವರ ಮಾತಾ ಪಿತೃಗಳಿಗೆ ತಮ್ಮ ಮಗ ಸಿದ್ಧಗಂಗಾ ಮಠದ ಉತ್ತರಾಧಿಕಾರಿಯಾಗುವ ಇಚ್ಛೆ ಇರಲಿಲ್ಲವೆಂಬುದು ಉದ್ದಾನಶಿವಯೋಗಿಗಳವರಿಗೆ ಕರ್ಣಾ-ಕರ್ಣಿಕೆಯಾಗಿ ತಿಳಿದು ಬಂತು. ಲೋಕ ಲೌಕಿಕರ ಪುತ್ರವಾತ್ಸಲ್ಯ, ಆಸೆ ಆಕಾಂಕ್ಷೆಗಳ ಪೂರ್ಣಅರಿವಿದ್ದ ಶಿವಯೋಗಿಗಳು ಶಿವಣ್ಣನವರ ತಂದೆ ತಾಯಿಯರನ್ನು ಸ್ವತಃ ತಾವೇ ಸಮಾಧಾನ ಪಡಿಸಿಬರಬೇಕೆಂದು ಸುಮಾರು 14 ಮೈಲಿ ದೂರವಿರುವ

27) 16—1—1930ನೆಯ ದಿವಸ ನಡೆದ ಘಟನೆಯ ವಿಷಯವನ್ನು ತಿಳಿಸಿದವರು ಕರ್ನಕುಪ್ಪೆ ಛೇರ್ಮನ್ ರೇವಣ್ಣನವರು.

28) ಈ ಘಟನೆ ನಡೆಯುವ ಒಂದೆರಡು ತಿಂಗಳ ಪೂರ್ವದಲ್ಲಿ ಶಿವಣ್ಣನವರು ಮಠಕ್ಕೆ ಬಂದಿದ್ದರಂತೆ ಆ ದಿನ ಹಳೆಯ ಮಠದಲ್ಲಿ ಹುಡುಗಾಟಿಕೆ ಮಾಡಿ ಉಳಿದವರನ್ನು ವಿನೋದಗೊಳಿಸಲು ಮರುಳಾರಾಧ್ಯರ ಕಪನಿ ಮತ್ತು ಅವುಗೆಗಳನ್ನು ಮೆಟ್ಟಿ, ಉಳಿದ ವಿದ್ಯಾರ್ಥಿಗಳನ್ನು ಬಡಿ ಬಡಿದು ನಮಸ್ಕಾರ ಮಾಡಿಸಿಕೊಂಡು ನಕ್ಕು ನಗಿಸಿದ್ದರಂತೆ. ಈ ವಿನೋದದ ಸಮಯದಲ್ಲಿ ಪಾಲ್ಗೊಂಡಿದ್ದವರಲ್ಲಿ ಈಗಿನ ಕನಕಪುರ ದೇಗುಲ ಮಠಾಧ್ಯಕ್ಷರಾದ ಮಹಾಲಿಂಗಸ್ವಾಮಿಗಳವರು. ಮರುಳಸಿದ್ಧಯ್ಯನವರೂ ಆಗಿದ್ದಾರೆ.

ವೀರಾಪುರಕ್ಕೆ ನಡೆದುಕೊಂಡ್ಡೇ ಹೋದರಂತೆ. ತಮ್ಮ ಮಗನನ್ನು ಉದ್ದಾನ ಶಿವಯೋಗಿಗಳು ತಮ್ಮ ಮಠದ ಉತ್ತರಾಧಿಕಾರಿಗಳನ್ನಾಗಿಮಾಡಿಕೊಂಡರಲ್ಲಾ, ಎಂಬ ಕೋಪದಿಂದ ತಂದೆಯವರಾದ ಪಟೇಲ್ ಹೊನ್ನಪ್ಪನವರು ಶಿವಯೋಗಿಗಳು ಬರುತ್ತಾರೆಂಬುದನ್ನು ತಿಳಿದೂ ಕೂಡ ಆ ದಿನ ಮನೆ ಬಿಟ್ಟು ಎಲ್ಲಿಗೋ ಹೊರಟುಹೋಗಿಬಿಟ್ಟರಂತೆ. ಶಿವಯೋಗಿಗಳು ಹೋಗಿ ಅವರು ಮನೆಯಲ್ಲಿಲ್ಲದಿರುವುದನ್ನರಿತು ಹಾಗೆಯೇ ಸ್ವಲ್ಪ ಕಾಲ ಮೇಲೆ ಹಿಂತಿರುಗಿ ಬಿಟ್ಟರು. ಇಡೀ ಊರಿಗೆ ಊರೇ ಶಿವಯೋಗಿಗಳ ಕ್ರೋಧವನ್ನರ್ಥಮಾಡಿಕೊಂಡು ಪಾದಗಳ ಮೇಲೆ ಬಿದ್ದು ಹೊರಳಾಡಿ ಕೋಪ ಮಾಡಿಕೊಳ್ಳಬಾರದು, ಶಿವಪೂಜೆ ಮುಗಿಸಿ ಪ್ರಸಾದ ಸ್ವೀಕರಿಸಿ ದಯಮಾಡಿಸಬೇಕೆಂದು ಕೇಳಿಕೊಂಡಿತು. ಪಟೇಲ್ ಹೊನ್ನಪ್ಪನವರ ಮನೆಯ ಬಳಗವೆಲ್ಲ ದಾರಿಗೆ ಅಡ್ಡವಾಗಿ ನಿಂತಿತ್ತು. ಆದರೆ ಅಚಲ ನಿರ್ಧಾರದ ಈ ವೀರವಿರಕ್ತರು ನೊಂದು ಬೆಂದು ಯಾರನ್ನು ಲೆಕ್ಕಿಸದೆ ಮಠಕ್ಕೆ ಹೊರಟುಬಂದರು. ಹೊನ್ನಪ್ಪನವರು ತಾವಾಗಿ ಒಂದ ಭಾಗ್ಯ ಕಳೆದುಕೊಂಡರು. ಶಿವಯೋಗಿಯ ಯಾವ ಕೃಪೆ ಅವರಿಗಾಗಿ ಕಾಯ್ದಿತ್ತೋ ಅದರಿಂದ ವಂಚಿತರಾದರು. ಧೃತಿ, ಕ್ಷಮೆ, ದಾಸೋಹಗುಣ, ಲಿಂಗಭಕ್ತಿಗೆ ಹೆಸರಾಗಿದ್ದ ಪಟೇಲ್ ಹೊನ್ನಪ್ಪನವರಿಗೆ ಈ ಸಮಯದಲ್ಲಿ ಅಜ್ಞಾನ ತಲೆದೋರಿದ್ದು ದೈವ ದುರ್ವಿಪಾಕವೇ ಸರಿ. ಅಂತೂ ಆ ಸಮಯದಲ್ಲಿ ಉದ್ದಾನ ಶಿವಯೋಗಿಗಳ ಕ್ರೋಧಕ್ಕೆ ಅವರು ಪಾತ್ರರಾದದ್ದಂತೂ ನಿಶ್ಚಯ. ಉದ್ದಾನ ಶಿವಯೋಗಿಗಳು ಬಂದಾಗ ವೀರಾಪುರ ಪಟೇಲರು ಹೀಗೆ ನಡೆದುಕೊಳ್ಳಬಾರದಾಗಿತ್ತೆಂದು ಇಂದಿಗೂ ಶ್ರೀ ಡಾ. ಶಿವಕುಮಾರಸ್ವಾಮಿಗಳು ಅನ್ನುತ್ತಿದ್ದಾರೆ. ಈ ಘಟನೆಯಿಂದ ಪಟೇಲ್ ಹೊನ್ನಪ್ಪನವರಿಗೆ ಕೆಡುಕೇ ಆಯಿತೆಂದು ಬಲ್ಲವರ ವಿವರಣೆ. ಆದರೇನು ಉದ್ದಾನಶಿವಯೋಗಿಗಳು ಶಿವಣ್ಣನವರನ್ನು ಸ್ವತಃ ಅವರ ಅನುಗ್ರಹದ ಮೇರೆಗೆ ಅವರಿಗೆ ಶ್ರೀ ಶಿವಕುಮಾರಸ್ವಾಮಿಗಳು ಎಂಬ ನೂತನಾಭಿಧಾನವಿಟ್ಟು ತಾ॥ 3-3-1930 ರಲ್ಲಿ ಉತ್ತರಾಧಿಕಾರಿಗಳನ್ನಾಗಿ ವಿಜೃಂಭಣೆಯಿಂದ ಕಾರ್ಯಮಾಡಿ ಮುಗಿಸಿದರು. ಶ್ರೀ ಶಿವಕುಮಾರ ಸ್ವಾಮಿಗಳು ವೀರಾಪುರದ ಪಟೇಲ್‌ರ ಬಗೆಗೆ ಅಸಮಾಧಾನ ತಳೆದರು. ಉದ್ದಾನ ಶಿವಯೋಗಿಗಳವರಿಗೆ ಈ ರೀತಿಯಲ್ಲಿ ಅವರು ನಡೆದುಕೊಂಡು ಮನಸ್ಸಿಗೆ ಖೇದಗೊಳಿಸಿದ್ದು ಬಹು ಸಂಕಟಕ್ಕೀಡುಮಾಡಿತ್ತು.

**ಶ್ರೀ ಶಿವಕುಮಾರಸ್ವಾಮಿಗಳವರನ್ನು ಸುಂದರ ಮೂರ್ತಿಯನ್ನಾಗಿ ಕಡೆದ ಮಹಾಶಿಲ್ಪಿ :—**

ಉದ್ದಾನಶಿವಯೋಗಿಗಳು ತಮ್ಮ ಅಂತಃಕರಣಗ್ರಂಥಿಯನ್ನು ಬಿಚ್ಚಿ ಶಿವಣ್ಣನವರೆಂಬ ವಟುವನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಶ್ರೀ ಶಿವಕುಮಾರಸ್ವಾಮಿಗಳು ಎಂಬ ಹೆಸರಿಟ್ಟು ಮಾಡಿಕೊಂಡ ಮೇಲೆ ಅವರ ಮುಂದಿನ ಕೆಲಸ ತಮ್ಮ ಶಿಷ್ಯರನ್ನು

ಸುಂದರಮೂರ್ತಿಯನ್ನಾಗಿ ಕಡೆದು ನಿಲ್ಲಿಸಲು ಸುಮಾರು 11 ವರ್ಷಗಳು ವಿನಿಯೋಗಿಸಿದರೆನ್ನಬಹುದು. ಈ ಹನ್ನೊಂದು ವರ್ಷಗಳ ಅವಧಿಯಲ್ಲಿ ಅವರನ್ನು ಅನೇಕ ಅಗ್ನಿ ಪರೀಕ್ಷೆಗಳಿಗೊಳಪಡಿಸಿದರು. ಹಲವಾರು ರೀತಿಯಲ್ಲಿ ಪರೀಕ್ಷಿಸಿ ನೋಡಿದರು. ಪುಟವಿಕ್ಕಿ ಒರಗೆ ಹಚ್ಚಿ ಬಣ್ಣಕ್ಕೆ ತಂದು, ಕಡಿದು, ಬಡಿದು ತಿಕ್ಕಿ, ಉಜ್ಜಿ ಲಿಂಗದೇವನ ಕಂಠಾಭರಣವನ್ನಾಗಿ ಮಾಡಿದರೆನ್ನಬೇಕು. ಒಳಗೊಳಗೆ ತಮ್ಮ ಶಿಷ್ಯರ ಕರ್ತವ್ಯ ದಕ್ಷತೆ, ಗಂಭೀರತೆ, ಸರ್ವಜೀವ ದಯಾಪರತೆ, ಪೂಜಾನಿಷ್ಠೆಗಳಿಗೆ ಹಿರಿಹಿರಿ ಹಿಗ್ಗುತ್ತ ಹೊರಹೊರಗೆ ಕೋಪ, ಭರ್ತ್ಸನೆಗಳನ್ನು ತೋರ್ಪಡಿಸುತ್ತಿದ್ದರು ಗುರುವಿನಿಂದಾಗುತ್ತಿರುವ ಈ ಮಾನಾಪಮಾನ, ಹಾನಿವೃದ್ಧಿಗಳನ್ನು ಸಹಿಸುವ ಶಕ್ತಿ ಇವರಲ್ಲಿ ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ಪರೀಕ್ಷಿಸಲು ಈ ರೀತಿ ಅಗ್ನಿಪರೀಕ್ಷೆಗಳನ್ನು ಅವರಿಗೆ ಒಡ್ಡುತ್ತಿದ್ದರು. ಕೈಗೆ ಹಣವನ್ನು ಹೆಚ್ಚಾಗಿ ಕೊಡುತ್ತಿರಲಿಲ್ಲ, ಆದರೆ ದಾಸೋಹದ ವ್ಯವಸ್ಥೆಯನ್ನು ಮಾಡಿರೆಂದು ಹೇಳಿಬಿಡುತ್ತಿದ್ದರು. ಕೇವಲ ಬೆಂಗಳೂರಿನಲ್ಲಿ ಬರುವ ಅಲ್ಪಸ್ವಲ್ಪ ಬಾಡಿಗೆ ಭಕ್ತರಿಂದ ಬರುವ ಅಲ್ಪಸ್ವಲ್ಪ ಕಾಣಿಕೆ ಇದರಿಂದ ದಾಸೋಹ ವ್ಯವಸ್ಥೆ ಏರ್ಪೋಡಿಸಲು ಶಿವಕುಮಾರಸ್ವಾಮಿಗಳವರಿಗೆ ಅಗ್ನಿಪರೀಕ್ಷೆಯಂತಾಗಿತ್ತು. ಆದರೂ ಉದ್ದಾನಶಿವಯೋಗಿಗಳವರ ಕೃಪೆಯಿಂದ ಅಪಾರ ಸಾಹಸದಿಂದ ಶಿವಕುಮಾರಸ್ವಾಮಿಗಳವರು ಯಾವ ಹೊಣೆಯೂ ಇಲ್ಲದೆ ದಾಸೋಹ ಕಾರ್ಯವನ್ನು ಮೊದಲಿಗಿಂತ ವಿಜೃಂಭಣೆಯಾಗಿ ನಡೆಸುವುದಕ್ಕೆ ಪ್ರಾರಂಭಿಸಿದರು. ಇದನ್ನು ಕಂಡ ಉದ್ದಾನಶಿವಯೋಗಿಗಳು ಚಿಕ್ಕವರ ಖರ್ಚುವೆಚ್ಚ ವಿಪರೀತವಾಗಿಹೋಯಿತು, ಹೀಗಾದರೆ ಮಠ ಹೇಗೆ ಉಳಿಯಬೇಕು ಇತ್ಯಾದಿ....ಮೇಲುನೋಟಕ್ಕೆ ಕೋಪ, ಗದರಿಕೆ ಮೊದಲಿಕೆಗಳನ್ನು ತೋರ್ಪಡಿಸುತ್ತಲೇ ಒಳಗೊಳಗೆ ಹಿರಿಹಿರಿ ಹಿಗ್ಗುತ್ತಿದ್ದರು ಒಮ್ಮೆ ದಾಸೋಹಕ್ಕೆ ಆವಶ್ಯಕತೆ ಉಂಟಾದಾಗ ಕೈಯಲ್ಲಿ ಹಣವಿಲ್ಲದೆ ವಿದ್ಯಾರ್ಥಿಗಳಿಂದ ಹಣವನ್ನು ಸಾಲ ಪಡೆದು ಬೇಳೆ ತರಿಸಿ ದಾಸೋಹಕ್ಕೆ ವಿನಿಯೋಗಿಸಿದ ಪ್ರಸಂಗವನ್ನು ಇಂದಿಗೂ ಶಿವಕುಮಾರಸ್ವಾಮಿಗಳು ನೆನೆಸಿಕೊಳ್ಳುತ್ತಾರೆ. 12-10 ಮೈಲು ದೂರದ ಹಳ್ಳಿಗಳಲ್ಲಿ ಭಿನ್ನಹಕ್ಕೆ ಒಪ್ಪಿಕೊಂಡಾಗ ಅಲ್ಲಿಗೆ ನಡೆದುಕೊಂಡು ಹೋಗಿ ಬಂದ ಪ್ರಸಂಗವನ್ನು ನೆನೆನೆನೆದು ಶಿವಕುಮಾರಸ್ವಾಮಿಗಳು ಇಂದೂ ಪುಳಕಿತ ಗಾತ್ರರಾಗುತ್ತಾರೆ. ವಾಹನ ಸೌಕರ್ಯ ಮೊದಲಾದವುಗಳ ಬಗೆಗೆ ಉದ್ದಾನಶಿವಯೋಗಿಗಳು ತಾವೇ ದುಡಿದು ಸಂಪಾದಿಸಿ ವಾಹನಸೌಕರ್ಯ ಮಾಡಿಕೊಳ್ಳಲಿಕ್ಕೆ ಹೇಳಿಕಳುಹಿಸುತ್ತಿದ್ದರು. ನನ್ನನ್ನು ಏನೂ ಕೇಳಕೂಡದೆಂದು ಕಟ್ಟಪ್ಪಣೆ ಮಾಡಿಬಿಡುತ್ತಿದ್ದರು. ದಾಸೋಹ, ವಿದ್ಯಾರ್ಥಿ ನಿಲಯಗಳ ಸುವ್ಯವಸ್ಥೆ ಭಾರವನ್ನು ಶಿವಕುಮಾರಸ್ವಾಮಿಗಳು ವಹಿಸಿಕೊಂಡ ಮೇಲೆ ಇವರ ಮೂಲಭೂತಗುಣಗಳಾದ ಅನುಕಂಪ, ದಾಕ್ಷಿಣ್ಯಪ್ರವೃತ್ತಿ, ದೀನದಲಿತೋದ್ಧಾರಾಸಕ್ತಿ ಯಾರನ್ನೂ ಏನನ್ನೂ ಕೇಳದಿರುವ ಸ್ವಭಾವ ಮುಂತಾದವುಗಳು ಇವರನ್ನು ಅನೇಕ ತೊಂದರೆಗಳಿಗೆ ಗುರಿಮಾಡಿದರೂ ಆ ತೊಂದರೆಗಳೆಲ್ಲ ಮರುಕ್ಷಣದಲ್ಲಿ ಮಾಯ

ವಾಗಿ ಬಿಡುತ್ತಿದ್ದವು ಇವೆಲ್ಲಉದ್ದಾನ ಶಿವಯೋಗಿಗಳವರ ಕೃಪೆ. ಅವರು ತಮ್ಮ ಶಿಷ್ಯರ ಕೈ ಬರಿದಾಗ ಕೂಡದು, ಧನ ಸಂಗ್ರಹವೂ ಆಗ ಕೂಡದು. ಅಹಸ್ಯಹನಿ ಜೀವನ ಅದರ ಕಷ್ಟನಷ್ಟಗಳ ಅರಿವಿನ ಅನುಭವವಾಗಬೇಕೆಂಬ ಅಭಿಪ್ರಾಯವುಳ್ಳವರಾಗಿದ್ದರು. ಕಷ್ಟದ ಮೇಲೆ ಕಷ್ಟಗಳು ಚಿಕ್ಕವರಿಗುಂಟಾಗಿ ಅದರಲ್ಲಿ ಅವರು ಪಾರಾಗಬೇಕೆಂಬ ಅಪೇಕ್ಷೆ ಉದ್ದಾನಪ್ಪನವರದು. ಆಗಾಗ ಉದ್ದಾನಶಿವಯೋಗಿಗಳು ಇಂಗ್ಲಿಷ್ ಓದಿದವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡು ಆಗಿದೆ ಇವರು ನಮ್ಮ ಆಚಾರ ವಿಚಾರ, ಪೂಜಾನಿಷ್ಠೆ, ದಾಸೋಹ ಸದ್ಭಾವದಲ್ಲಿ ಎಷ್ಟರಮಟ್ಟಿಗೆ ಲೋಕದ ಮಾನ ಮನ್ನಣೆಗಳಿಗೆ ಅರ್ಹರಾಗುವರೋ ಏನೋ ಎಂಬ ಭಯವಿತ್ತೆಂದು ತೋರುತ್ತದೆ ಆದ್ದರಿಂದಲೇ ಈ ಅಗ್ನಿಪರೀಕ್ಷೆಗಳಿಗೆ ಗುರಿ ಪಡಿಸುತ್ತಿದ್ದರಂತೆ. ಶಿವಕುಮಾರ ಸ್ವಾಮಿಗಳವರ ಪೂರ್ವಾಶ್ರಮದ ಬಂಧುಬಳಗದವರಿಗೆ ಕೊಟ್ಟ ದುಡ್ಡುಕಾಸುಗಳ ವಸೂಲಿಗೆ ಅವರನ್ನೇ ಕಳಿಸಿ ವಸೂಲುಮಾಡಿಕೊಂಡೇಬರಬೇಕೆಂದು ಹೇಳುತ್ತಿದ್ದರಂತೆ, ಗುರುಗಳ ಅಪ್ಪಣೆಯನ್ನು ಚಾಚೂತಪ್ಪದೆ ನಡೆಸಿಕೊಂಡು ಬರತೊಡಗಿದ ಮೇಲೆ ಇವರಿಗೆ ಪೂರ್ವಾಶ್ರಮದ ಜನ್ಮದುರಾಶೆ ಕಳೆದಿದೆಯೆಂದು ತೃಪ್ತಿಪಡುತ್ತಿದ್ದರಂತೆ. ಒಮ್ಮೆ ಒಂದು ಪರೀಕ್ಷೆಯ ಪ್ರಸಂಗ ನಡೆದುದು ಹೀಗೆ.

ಸಕಲೇಶಪುರದ ಗಡ್ಡದ ಮನೆ ಗೌಡರು ಒಂದು ಹೊಸಮನೆ ಕಟ್ಟಿಸಿ ಅದರ ಪ್ರವೇಶೋತ್ಸವಕ್ಕೆ ದಯಮಾಡಿಸಬೇಕೆಂದು ಉದ್ಧಾನ ಶಿವಯೋಗಿಗಳನ್ನು ಒಪ್ಪಿಸಲಿಕ್ಕೆ ಬಂದರಂತೆ. ಉದ್ಧಾನಸ್ವಾಮಿಗಳವರನ್ನು ಕಂಡು, ತಾವು ನನ್ನ ಹೊಸಮನೆ ಗೃಹ ಪ್ರವೇಶೋತ್ಸವ ನಡೆಸಿಕೊಡಲು ದಯಮಾಡಿಸಬೇಕೆಂದು ಬೇಡಿದರು. ಆಗ ಶಿವಯೋಗಿಗಳು 'ಚಿಕ್ಕವರನ್ನೇ ಕರೆದುಕೊಂಡು ಹೋಗಿ ಕಾರ್ಯ ಮುಗಿಸಿಕೊಳ್ಳಿ' ಎಂದರು ಗೌಡರು ಚಿಕ್ಕವರನ್ನು ಕಂಡು ಸ್ವಾಮಿಗಳ ಅಪ್ಪಣೆಯಾಗಿದೆ ತಾವು ದಯಮಾಡಿಸಿ ನನ್ನ ಮನೆಯ ಪ್ರವೇಶೋತ್ಸವವನ್ನು ನೆರವೇರಿಸಿಕೊಟ್ಟು ಬರಬೇಕೆಂದು ಬೇಡಿದರು. ಆಗ ಶಿವಕುಮಾರಸ್ವಾಮಿಗಳು ಗುರುಗಳ ಹತ್ತಿರ ಬಂದು ಗೌಡರ ಬಿನ್ನಹವನ್ನು ತಿಳಿಸಿದರು. ಶಿವಯೋಗಿಗಳು 'ಹೋಗಿಬಿಟ್ಟು ಕೆಲಸ ಮುಗಿಸಿ ಬನ್ನಿರಿ' ಎಂದು ಅಜ್ಞೆ ಮಾಡಿದರು. ಗೌಡರು ದಿನಾಂಕವನ್ನು ತಿಳಿಸಿ ಬಂದುಬಿಟ್ಟರು. ಸಕಲೇಶಪುರಕ್ಕೆ ಹೋಗುವ ದಿನ ಬಂತು. ನಾಳೆಯೇ ಗೃಹಪ್ರವೇಶವಿದ್ದಂತೆ ಇಂದು ಬಂದು ಉದ್ದಾನ ಶಿವಯೋಗಿಗಳನ್ನು ಶಿವಕುಮಾರ ಸ್ವಾಮಿಗಳು ಸಕಲೇಶಪುರಕ್ಕೆ ಹೋಗಿಬರಲು ಅಪ್ಪಣೆ ಕೇಳಿದರು. ಶಿಷ್ಯರಮನಃ ಪರೀಕ್ಷೆಗೋ ಏನೋ 'ಹೋಗಕೂಡದು' ಎಂದುಬಿಟ್ಟರು. ಈ ಮಾತು ಕೇಳಿ ಶಿವಕುಮಾರಸ್ವಾಮಿಗಳು ಬೆಚ್ಚಿಬಿದ್ದರು. ಪುನಃ 'ಹಿಂದೆ ತಾವೇ ಅಪ್ಪಣೆ ಮಾಡಿದ ಪ್ರಕಾರ ಅವರ ಬಿನ್ನಹವನ್ನು ಒಪ್ಪಿಕೊಂಡು ಆಗಿದೆ ಹೋಗದಿದ್ದರೆ ........ ಅಪರಾಧವಾಗುವುದು' ಎಂದರು. ಆಗ ಪುನಃ ಉದ್ದಾನಸ್ವಾಮಿಗಳು ಕತ್ತೆತ್ತಿ

ಮುಖವನ್ನು ನೋಡಿ 'ಸ್ವಾಮಿಗಳೇ, ಹೋಗಕೂಡದು! ಹೋಗಕೂಡದು!! ಹೋಗಕೂಡದು!!! ' ಗೊತ್ತಾಯಿತೋ; ಜಾತ್ರೆ ಬಂತು. ಅಕ್ಕಿ, ಮೆಣಸಿನಕಾಯಿ, ಬೆಲ್ಲ, ಹಿಟ್ಟು, ಕಾಯಿ ಹೊಂದಿಸಬೇಕು. ಮಠಕ್ಕೆ ಸುಣ್ಣ ಹೊಡಿಸಬೇಕು. ಸೌದೆ ಇಲ್ಲ. ಇವನ್ನೆಲ್ಲ ಬಿಟ್ಟು ಸಕಲೇಶಪುರಕ್ಕೆ ಹೋಗುತ್ತಾರಂತೆ. ಹೋಗಕೂಡದು, ಎಂದರೆ ಹೋಗಕೂಡದು ತಿಳಿಯಿತೇ' ಎಂದುಬಿಟ್ಟರು. ಶಿವಕುಮಾರಸ್ವಾಮಿಗಳಿಗೆ ಒಂದೂ ತಿಳಿಯದಂತಾಗಿ ಸ್ವಲ್ಪ ಹೊತ್ತು ಸುಮ್ಮನೆ ನಿಂತುಬಿಟ್ಟರು. 'ಯಾಕ್ರಿ ಸ್ವಾಮಿಗಳೇ, ಸುಮ್ಮನೆ ನಿಂತಿರಿ' ಎಂದರು ಶಿವಯೋಗಿಗಳು. ಒಪ್ಪಿಗೆ ಕೊಟ್ಟು ಈಗ ಹೋಗದಿದ್ದರೆ ಹೇಗೆ ? ಎಂಬ ಚಿಂತೆಗೊಳಗಾಗಿದ್ದ ಶಿವಕುಮಾರಸ್ವಾಮಿಗಳು ಪುನಃ ಮೆಲ್ಲನೆಯ ಧ್ವನಿಯೆತ್ತಿ 'ತಾವು ಮೊದಲೇ ಬೇಡ ಎಂದಿದ್ದರೆ ಒಪ್ಪಿಗೆ ಕೊಡುತ್ತಿರಲಿಲ್ಲ. ತಮ್ಮನ್ನು ಕೇಳಿಯೇ ಒಪ್ಪಿಗೆ ಕೊಟ್ಟುಬಿಟ್ಟಿದೆ. ಶಿವಪೂಜಾಮರಿಗಳನ್ನು ಆಗಲೇ ಕಳಿಸಿ ಆಗಿದೆ. ಅವರು ಅಲ್ಲಿಗೆ ಇಂದು ರಾತ್ರಿಯೇ ಹೋಗಿ ತಲುಪಿರುತ್ತಾರೆ. ಸ್ವಾಮಿಗಳು ಬರುತ್ತಾರೆಂದು ತಿಳಿಸಿಬಿಡುತ್ತಾರೆ. ಅವರೆಲ್ಲ ದಾರಿ ಕಾಯುತ್ತಾರೆ. ಈಗ ತಪ್ಪಿಸಿಕೊಂಡರೆ ಮಠಕ್ಕೆ ಅಪವಾದ ಬರುತ್ತದೆ. ಇದಕ್ಕೂ ಮಿಕ್ಕಿ ತಮ್ಮ ಅಪ್ಪಣೆಯಾದಂತೆ ಆಗಲಿ. ತಮಗೆ ಬೇಡವಾದರೆ ನನಗೂ ಬೇಡವೇ ಬೇಡ; ನಾನು ತಮ್ಮ ಆಜ್ಞಾಧಾರಕ ' ಎನ್ನಲು ಉದ್ಯಾನಸ್ವಾಮಿಗಳು ಶತಪಥ ತಿರುಗುತ್ತಾ ಮೂಗಿನ ಮೇಲೆ ಬೆರಳಾಡಿಸಿ ಶಿವಕುಮಾರಸ್ವಾಮಿಗಳ ಮುಖ ನೋಡುತ್ತಾ, ಹೂಂ....ಏನು....ಏನು.... ಮಠದ ಖರ್ಚು ವೆಚ್ಚ ವ್ಯವಹಾರ ಬಹಳ, ಜಾತ್ರೆ ಬಂತು! ಜಾತ್ರೆ ಬಂತು; ಹೊಂದಿಸೋದು ಬಹಳ ಇದೆ....ಹುಂ....ಆಗಲಿ ಹೋಗಿಬನ್ನಿ. ಕೂಡಲೇ ಹಿಂದಿರುಗಿ ಬಂದುಬಿಡಬೇಕು ತಿಳಿಯಿತೇ ! ಎಂದು ಹೇಳಿದರು. ಶಿವಕುಮಾರಸ್ವಾಮಿಗಳಿಗೆ ಸ್ವರ್ಗವೇ ಧರೆಗಿಳಿದು ಬಂದಂತಾಯಿತು. ನಮಸ್ಕರಿಸಿ ನಗುತ್ತಾ ಹೊರಟು ಹೋದರು. ಯಾರಿಗಾದರೂ ಏನನ್ನಾದರೂ ಹೇಳಬೇಕಾದರೆ ಶಿವಯೋಗಿಗಳು ಮೂಗಿನ ಮೇಲೆ ಬೆರಳಿಟ್ಟು ಬೇಕು ಅಥವಾ ಬೇಡ ಎಂದು ಹೇಳುತ್ತಿದ್ದರಂತೆ. ಇದೊಂದು ವಿಧದಲ್ಲಿ ಶಿಷ್ಯ ಪರೀಕ್ಷೆಯಾದರೆ ಇನ್ನೊಂದು ವಿಧದಲ್ಲಿ ಲೋಕದ ಅಭಿಪ್ರಾಯಗಳನ್ನು ಶಿವಯೋಗಿಗಳು ತಿಳಿಯುತ್ತಿದ್ದರು.

(ಮುಂದುವರಿಯುವುದು)

---

ದೇವ ಲೀಲೆಯೋ ಕಾಣೆ ಕರ್ಮಜಾಲವೊ ಕಾಣೆ
ಅದು ನಮ್ಮ ಬುದ್ಧಿಯಾಚೆಗಿನ ಮಾತು.
ಯಾವುದೇನೇ ಇರಲಿ ಪ್ರೀತಿಯಂಥಾ ವಸ್ತು
ಭವದಲ್ಲಿ ಕಾಣೆ ಮನಗಂಡ ಮಾತು.

—ಮಧುರಚೆನ್ನ.

# ನವಗ್ರಹ ಕೂಟ-1982 ಪ್ರಳಯ! ಎಚ್ಚರಿಕೆ!!

ಟಿ. ಎನ್. ಪ್ರಕಾಶ್

(ಗ್ರಹಗಳ ಕೂಟವೆಂದರೆ ಅಮಂಗಳಕರವಾದ ವಿಷಯವೆಂದೇ ಭಾರತೀಯರ ಭಾವನೆ; ಏನೋ ಒಂದು ಉದ್ವೇಗ. ಸುಮಾರು ಎರಡು ಶತಮಾನಗಳಿಗೊಮ್ಮೆ ಸಂಭವಿಸುವ ನವಗ್ರಹ ಕೂಟವು ಫೆಬ್ರುವರಿ 1982ರಲ್ಲಿ ಜರುಗಲಿದೆ. ಲೇಖಕರು ತಮ್ಮ ವಿಶಿಷ್ಟ ಶೈಲಿಯಲ್ಲಿ ಈ ಅಪೂರ್ವ ಘಟನೆಯ ಬಗ್ಗೆ ವಿವರಗಳನ್ನು ನೀಡಿದ್ದಾರೆ. ಇದನ್ನು ಓದಿ ನೋಡಿ! ಕಾದು ನೋಡಿ!!)

ಸಾವಿರಾರು ವರ್ಷಗಳಿಂದ ಮಾನವನು, ಭೂಮಿಯೇ ಈ ಬ್ರಹ್ಮಾಂಡದ ಕೇಂದ್ರ ಬಿಂದು; ಇದರ ಸುತ್ತ ಸೂರ್ಯ ಚಂದ್ರಾದಿಗಳು ಸುತ್ತುತ್ತವೆಯೆಂದು ನಂಬಿದ್ದನು. ಆದರೆ ಮಾನವನ ವೈಜ್ಞಾನಿಕ ಪ್ರವೃತ್ತಿ ಬೆಳೆದಂತೆ, ಗ್ರಹಗಳು ಸೂರ್ಯನ ಸುತ್ತ ಸುತ್ತುತ್ತ ಸೂರ್ಯನೂ ಸಹ ತನ್ನಂತಹ ಸಾವಿರಾರು ದಶಲಕ್ಷ ನಕ್ಷತ್ರಗಳೊಡಗೂಡಿ ಬಾಹ್ಯಾಕಾಶದಲ್ಲಿ ಸುತ್ತುತ್ತಲಿದ್ದಾನೆಂಬುದನ್ನು ಅರಿತ.

ಸೂರ್ಯನು ಒಂದು ಸೆಕೆಂಡಿಗೆ 60 ಮೈಲಿ ವೇಗದಲ್ಲಿ ಚಲಿಸುತ್ತಾ ತನ್ನ ಅಕ್ಷದ ಮೇಲೆ ಒಂದು ಸುತ್ತು ಸುತ್ತಲು 27 ದಿನಗಳನ್ನು ತೆಗೆದುಕೊಳ್ಳುತ್ತಾನೆ. ಭೂಮಿಯು ಸೂರ್ಯನ ಸುತ್ತ 93 ದಶಲಕ್ಷ ಮೈಲುಗಳ ಅಂತರದಲ್ಲಿ ಪರಿಭ್ರಮಿಸುತ್ತಿದೆ. ಇದು ಸೆಕೆಂಡಿಗೆ 18.5 ಮೈಲಿ ವೇಗದಲ್ಲಿ ಚಲಿಸುತ್ತ ಸೂರ್ಯನ ಸುತ್ತ ಒಂದು ಪ್ರದಕ್ಷಿಣೆಯನ್ನು ಹಾಕಲು ಒಂದು ವರ್ಷ ಬೇಕಾಗುತ್ತದೆ. ಇದಕ್ಕಿಂತ ಒಳಗಿನ ಪಥಗಳಲ್ಲಿ ಬುಧ ಮತ್ತು ಶುಕ್ರ ಗ್ರಹಗಳು, ಹೊರಪಥಗಳಲ್ಲಿ ಮಂಗಳ, ಗುರು, ಶನಿ, ಯುರೇನಸ್, ನೆಪ್ಚೂನ್ ಮತ್ತು ಪ್ಲೂಟೋ ಗ್ರಹಗಳು ಸೂರ್ಯನನ್ನು ಸುತ್ತುತ್ತಲಿವೆ. ಸೂರ್ಯನ ಆಕರ್ಷಣಾ ಶಕ್ತಿಗೊಳಪಟ್ಟ ಎಲ್ಲಾ ಗ್ರಹಗಳೂ ನಿರ್ದಿಷ್ಟ ಕಕ್ಷೆಯಲ್ಲಿ ಸುತ್ತುತ್ತಿರುತ್ತವೆ. ಸೌರವ್ಯೂಹದಲ್ಲಿ ಅತ್ಯಂತ ದೂರದಲ್ಲಿರುವ ಗ್ರಹವಾದ ಪ್ಲೂಟೋ ಸೂರ್ಯನಿಂದ 3 ರಿಂದ 4 ಶತಕೋಟಿ ಮೈಲುಗಳ ಅಂತರದಲ್ಲಿ ಸುತ್ತುತ್ತಲಿದೆ. ಸೂರ್ಯನ ಶಾಖ ಈ ದೂರವನ್ನು ತಲುಪಲು ಸಾಧ್ಯವಾಗದೆ ಪ್ಲೂಟೋ ಒಂದು ಮಂಜಿನಗಡ್ಡೆಯಾಗಿದೆ.

**ನವಗ್ರಹಕೂಟ**

ನಮ್ಮ ಸೌರವ್ಯೂಹದಲ್ಲಿ ಒಂಭತ್ತು ಗ್ರಹಗಳು ಸೂರ್ಯನ ಸುತ್ತಲೂ ಸುತ್ತುತ್ತಿದ್ದಂತೆ, ಅವು ಒಂದೇ ಪಾರ್ಶ್ವದಲ್ಲಿ ಒಂದು ಸಾಲಿನಲ್ಲಿ 179 ವರ್ಷಕ್ಕೊಮ್ಮೆ ಬರು

ವೆ. 1982ನೇ ಇಸವಿ ಫೆಬ್ರವರಿ ತಿಂಗಳಿನಲ್ಲಿ ಇಂತಹ ಒಂದು ಅದ್ಭುತವಾಗುತ್ತದೆ. ಇದರಿಂದಾಗುವ ಪರಿಣಾಮಗಳೇನು? ಭೂಮಿಯು ಈ ಒತ್ತಡವನ್ನು ತಡೆಯಬಲ್ಲದೇ ಅಥವಾ ಭೂಪ್ರಳಯವಾಗುವುದೇ? ಪ್ರಭಾವವನ್ನು ಗುರುಗ್ರಹ ಪ್ರಭಾವವೆಂದು ಏಕೆ ಕರೆಯಲಾಗುತ್ತದೆ.? ಜ್ಯೋತಿಷ್ಯಕಾರರು ಇದರ ಬಗ್ಗೆ ಏನು ಹೇಳುವರು? ವಿಜ್ಞಾನದ ಹೇಳಿಕೆ ಏನು? ಜ್ಯೋತಿಷ್ಯ ಮತ್ತು ವಿಜ್ಞಾನ ಈ ವಿಷಯದಲ್ಲಿ ಸಮನಾಗಿ ವರ್ತಿಸುವುದೇ? ಎಂಬ ವಿಚಾರವನ್ನು ಪರಿಶೀಲಿಸೋಣ.

## ಪ್ರಳಯ—1982

ಎಲ್ಲಾ ಗ್ರಹಗಳೂ 1982 ಫೆಬ್ರವರಿಯಲ್ಲಿ ಸೂರ್ಯನಿಂದ ಒಂದೇ ಪಾರ್ಶ್ವದಲ್ಲಿ ಒಂದು ರೇಖೆಯಲ್ಲಿ ಸೇರುವುದರಿಂದ ಎಲ್ಲಾ ಗ್ರಹಗಳ ಆಕರ್ಷಣಾ ಶಕ್ತಿಯ ಪ್ರಭಾವವು ಸೂರ್ಯನ ಮೇಲೆ ಬೀಳುತ್ತದೆ. ಈ ಪ್ರಭಾವವು ಸೂರ್ಯನನ್ನೇ ನಡುಗಿಸುವಷ್ಟಿರುತ್ತದೆ. ಇದರಿಂದ ಸೂರ್ಯನ ಚಟುವಟಿಕೆಯು ಹೆಚ್ಚಿ ಅವನು ಪ್ರತಿರೋಧಿಸುತ್ತಾನೆ. ಇದರಿಂದ ಅವನ ಆಕರ್ಷಣಾ ಶಕ್ತಿಯು ಹೆಚ್ಚಿ ಅವನಲ್ಲಿ ಶಕ್ತಿಯುತವಾದ ಅಲೆಗಳುತ್ಪತ್ತಿಯಾಗುತ್ತವೆ. ಇದರ ಪರಿಣಾಮವಾಗಿ ಸೂರ್ಯನಲ್ಲಿ ಬಿರುಗಾಳಿಗಳೆದ್ದು ಸೂರ್ಯನ ಜ್ವಾಲೆಯು ಧಗ ಧಗನೆ ಉರಿದು ಆಕಾಶಕ್ಕೆ ಹರಡುತ್ತದೆ. ಈ ಒಂದು ಕ್ರಿಯೆಯ ಪರಿಣಾಮವಾಗಿ ಅಣುಗಳು ಸೂರ್ಯನಿಂದ ಸಿಡಿಯುತ್ತವೆ. ಇದರಿಂದ ಸೂರ್ಯನಲ್ಲಿ ಕಲೆಗಳುಂಟಾಗುತ್ತವೆ. ಸೂರ್ಯನಿಂದಾಗುವ ವಿಕಿರಣಗಳು ಭೂಮಿಯ ಮೇಲ್ಭಾಗದಲ್ಲಿ ವಾಯುಮಂಡಲದ ಬದಲಾವಣೆಗೆ ಕಾರಣವಾಗುತ್ತವೆ. ಅಲ್ಲದೆ ಈ ಕ್ರಿಯೆಗಳಿಂದ ರೇಡಿಯೋ ತರಂಗಗಳು ತಲ್ಲಣಗೊಳ್ಳುತ್ತವೆ. ಹವಾಮಾನದಲ್ಲಿ ಸಂಪೂರ್ಣ ಬದಲಾವಣೆಯಾಗುತ್ತದೆ. ಮೇಲ್ಭಾಗದ ವಾಯುಮಂಡಲದಲ್ಲಿ ಗಾಳಿಯು ಬೀಸುವ ದಿಕ್ಕನ್ನು ಬದಲಾಯಿಸುತ್ತದೆ. ಗ್ರಹಗಳು ತಮ್ಮ ಅಕ್ಷದ ಮೇಲೆ ತಿರುಗುವ ವೇಗಕ್ಕೆ ತಾತ್ಕಾಲಿಕ ಅಡಚಣೆಯುಂಟಾಗುತ್ತದೆ. ಇದರಿಂದ ಗ್ರಹಗಳು ನಡುಗುವ ಸಂಭವ ಹೆಚ್ಚಾಗಿರುತ್ತದೆ. ಹೀಗೇನಾದರೂ ಗ್ರಹಗಳು ನಡುಗಿದಲ್ಲಿ ಪ್ರಳಯ ಖಂಡಿತವೆಂಬುದು ಖಗೋಳ ಶಾಸ್ತ್ರಜ್ಞರ ಅಭಿಪ್ರಾಯ.

## ಗುರುಗ್ರಹ ಪ್ರಭಾವ

ಈ ಒಂದು ಅದ್ಭುತಕ್ಕೆ ಗುರುಗ್ರಹಪ್ರಭಾವವೆಂದು ಕರೆಯುತ್ತಾರೆ. ಎಲ್ಲಾ ಗ್ರಹಗಳಿಗಿಂತಲೂ ಗುರುಗ್ರಹವು ಆಕಾರದಲ್ಲಿ ದೊಡ್ಡದಾಗಿರುತ್ತದೆ. ಇದು ಭೂಮಿಗಿಂತ ಸಾವಿರ ಪಟ್ಟು ದೊಡ್ಡದಾಗಿದೆ ಮತ್ತು ಮಿಕ್ಕೆಲ್ಲ ಗ್ರಹಗಳನ್ನು ಒಂದುಗೂಡಿಸಿದಲ್ಲಿ, ಅವೆಲ್ಲದರ ಒಟ್ಟು ಆಕಾರದ ಎರಡರಷ್ಟು ದೊಡ್ಡದಾಗಿರುತ್ತದೆ. ಆದುದರಿಂದ ಈ ಗ್ರಹದ ಆಕರ್ಷಣಾ ಶಕ್ತಿಯು ಮಿಕ್ಕೆಲ್ಲ ಗ್ರಹಗಳ ಮೇಲೆ ಬಹಳವಾಗಿರುತ್ತದೆ.

ಅಲ್ಲದೇ ಸೂರ್ಯನ ಮೇಲೂ ಸಹ ಇದರ ಪ್ರಭಾವ ಬಹಳವಾಗಿದೆ. ಎಲ್ಲಾ ಗ್ರಹ ಗಳಿಗಿಂತಲೂ ಗುರುಗ್ರಹದ ಪ್ರಭಾವವು ಜಾಸ್ತಿ ಇರುವುದರಿಂದಲೇ ಈ ಅದ್ಭುತವನ್ನು ಗುರುಗ್ರಹಪ್ರಭಾವವೆಂದು ಕರೆಯುತ್ತಾರೆ.

### ಖಗೋಳ ಶಾಸ್ತ್ರಜ್ಞರ ಪ್ರಕಾರ

ಖಗೋಳ ಶಾಸ್ತ್ರಜ್ಞರ ಪ್ರಕಾರ ಮತ್ತು ಇಲ್ಲಿಯವರೆವಿಗೆ ದೊರೆತಿರುವ ಅಂಕಿ ಅಂಶಗಳ ಪ್ರಕಾರ ಗ್ರಹಗಳು ಒಂದು ರೇಖೆಯಲ್ಲಿ ಬಂದಾಗಲೆಲ್ಲಾ ಭೂಕಂಪವಾಗಿದೆ. ಆದುದರಿಂದ ಆಗ ಭೂಕಂಪನಕ್ಕೆ ಗ್ರಹಗಳ ಪ್ರಭಾವವು ಅಧಿಕವಾಗಿರುತ್ತದೆ.

ಭೂಮಿಯ ಮೇಲೆ ಈ ಒಂದು ಪ್ರಭಾವದಿಂದ ಮತ್ತು ಭೂಮಿಯ ತಿರುಗು ವಿಕೆಗೆ ತಾತ್ಕಾಲಿಕ ಅಡಚಣೆಯುಂಟಾಗುವುದರಿಂದ ಭೂಮಿಯು ಆಯಾಸಗೊಳ್ಳು ತ್ತದೆ. ಇದರಿಂದ ಭೂಕಂಪನವಾಗುತ್ತದೆ. ಹೀಗೆ ಅಪಾಯಕ್ಕೊಳಗಾಗುವ ಪ್ರದೇಶ ಗಳು ಯಾವುವೆಂದರೆ, ಪೆಸಿಫಿಕ್ ಮಹಾಸಾಗರದ ಅಂಚಿನಲ್ಲಿ ಹೆಚ್ಚು ಭೂಕಂಪ ವಾಗುವ ಸ್ಥಳಗಳೆಂದು ಗುರುತಿಸುವ ಪ್ರದೇಶಗಳಾದ ದಕ್ಷಿಣ ಅಮೇರಿಕಾದಿಂದ ಉತ್ತರ ಅಮೇರಿಕಾದವರೆವಿಗೂ ಇರುವ ಅಂಚಿನ ಪ್ರದೇಶಗಳಾದ ಕ್ಯಾಲಿಫೋರ್ನಿಯಾ, ಸ್ಯಾನ್‌ಫ್ರಾನ್ಸಿಸ್ಕೋ ಮತ್ತು ಏಷ್ಯಾದ ಪ್ರದೇಶಗಳು, ದಕ್ಷಿಣ ಪೆಸಿಫಿಕ್ ಇತ್ಯಾದಿ.

ಈಗಾಗಲೇ ಸ್ಥಿರಪಟ್ಟಿರುವಂತೆ ಭೂಮಿಯ ಅಸ್ತಿತ್ವಕ್ಕೆ ಧಕ್ಕೆಯುಂಟಾದಾಗ ಲೆಲ್ಲಾ ಬಾಕಿ ಗ್ರಹಗಳಲ್ಲೂ ಕಂಪನ ಉಂಟಾಗುತ್ತದೆ.

### ಜ್ಯೋತಿಶ್ಶಾಸ್ತ್ರಜ್ಞರ ಪ್ರಕಾರ

ಜ್ಯೋತಿಶ್ಶಾಸ್ತ್ರಜ್ಞರ ಪ್ರಕಾರ 1982ರ ಫೆಬ್ರವರಿಯಲ್ಲಿ ಸೂರ್ಯನು ಬುಧಗ್ರಹ ಮತ್ತು ಶುಕ್ರಗ್ರಹಗಳ ಜೊತೆಯಲ್ಲಿ ಮಕರ ರಾಶಿಯಲ್ಲಿರುವುದರಿಂದಲೂ, ಗುರು ಗ್ರಹವು ತುಲಾ ರಾಶಿಯಲ್ಲಿರುವುದರಿಂದಲೂ ಶನಿ ಮತ್ತು ಮಂಗಳ ಗ್ರಹಗಳು ಕನ್ಯಾ ರಾಶಿಯಲ್ಲಿರುವುದರಿಂದಲೂ, ವಿನಾಶವು ಶತಸಿದ್ಧವೆಂದು ಊಹಿಸಿರುತ್ತಾರೆ. ಇದು ಪ್ರಪಂಚದಾದ್ಯಂತ ಎಲ್ಲರಲ್ಲೂ ಭಯವನ್ನು ಹುಟ್ಟಿಸಿರುತ್ತದೆ. ವಿಜ್ಞಾನಿಗಳ ವೈಜ್ಞಾ ನಿಕ ಸಂಶೋಧನೆಗಳೂ ಇದನ್ನೇ ಸ್ಥಿರೀಕರಿಸುತ್ತಲಿರುವುದರಿಂದ 1982ನೇ ಇಸವಿಯೇ ಇದಕ್ಕೆ ಉತ್ತರ ನೀಡಬೇಕಾಗಿದೆ.

### ಇದರಿಂದಾಗುವ ನಷ್ಟವೇನು?

ಈ ಒಂದು ಘಟನೆ 1982ರಲ್ಲಿ ನಿಜವಾಗಿಯೂ ಜರುಗಿದರೆ ಲಕ್ಷಾಂತರ ಜನರು ಸಾಯುವರೆಂದೂ, ಆಸ್ತಿಪಾಸ್ತಿಗಳು ನಾಶವಾಗುವುದೆಂದೂ ಅಂದಾಜು ಮಾಡಲಾಗಿದೆ. ಈಗಾಗಲೇ ಈ ಭಯ ಕ್ಯಾಲಿಫೋರ್ನಿಯಾದ ಜನತೆಯಲ್ಲಿ ಮೂಡಿದೆ.

## 179 ವರ್ಷಗಳ ಹಿಂದೆ ಏನಾಯಿತು ?

ನಾವು ಹಿಂದಿನ ಅಂಕಿ ಅಂಶಗಳನ್ನು ಪರಿಶೀಲಿಸಿದಾಗ ಈಗ್ಗೆ 179 ವರ್ಷಗಳ ಹಿಂದೆ ಗ್ರಹಗಳು ಒಂದೇ ಸಾಲನಲ್ಲಿ ಸೇರಿದ್ದಾಗ ಸೂರ್ಯನ ಚಟುವಟಿಕೆಯು ಕಡಮೆಯಿತ್ತೆಂದು ಸ್ಥಿರಪಟ್ಟಿದೆ. ಆದರೆ ಈಗ ಸೂರ್ಯನ ಚಟುವಟಿಕೆಯು ಮಿತಿ ಮೀರಿರುವುದರಿಂದ 1982ರಲ್ಲಿ ಜರುಗುವ ಅದ್ಭುತವು ವಿಪರೀತವಾದುದೆಂದು ಊಹಿಸಲಾಗಿದೆ. ಇದಲ್ಲದೇ ಭೂಮಿಯು ಈಗಾಗಲೇ ಮಾನವನ ಕೈ ಕೆಳಗೆ ಸಿಕ್ಕಿ ಅದರ ನೈಸರ್ಗಿಕ ಸಮತೋಲನಕ್ಕೆ ಧಕ್ಕೆ ಒದಗಿರುವುದರಿಂದ ಅದು ಈ ಪ್ರಭಾವದ ಶಕ್ತಿಯನ್ನು ಸಂಪೂರ್ಣವಾಗಿ ತಡೆಯಲಾಗದೇ ಭೂ ಕಂಪನವಾಗುವ ಸಾಧ್ಯತೆಗಳು ಹೆಚ್ಚಾಗಿರುತ್ತದೆ.

## ಕೆಲವು ವಿಜ್ಞಾನಿಗಳ ವಿರೋಧಾಭಿಪ್ರಾಯ

ಗುರುಗ್ರಹದ ಪ್ರಭಾವವು ಸೂರ್ಯನ ಮೇಲೆ ಮಿಕ್ಕೆಲ್ಲ ಗ್ರಹಗಳಿಗಿಂತ ಹೆಚ್ಚಾಗಿರುತ್ತದೆ. ಹೀಗೆ ಗುರುವು ತನ್ನ ಆಕರ್ಷಣ ಶಕ್ತಿಯಿಂದ 1982ರ ಲ್ಲಿ ಮಿಕ್ಕೆಲ್ಲ ಗ್ರಹಗಳಿಂದೊಡಗೂಡಿ ಸೂರ್ಯನನ್ನು ಆಕರ್ಷಿಸುತ್ತಾನೆ. ಆದರೆ ಸೂರ್ಯನ ಆಕರ್ಷಣಾ ಶಕ್ತಿಯು ಗುರುಗ್ರಹಕ್ಕಿಂತ ಲಕ್ಷಾಂತರ ಪಟ್ಟು ಹೆಚ್ಚಾಗಿರುವುದರಿಂದ ಈ ಗ್ರಹಗಳೆಲ್ಲದರ ಪ್ರಭಾವವು ಸೂರ್ಯನಿಗೆ ಯಾವ ತೊಂದರೆಯನ್ನೂ ಉಂಟು ಮಾಡಲು ಸಾಧ್ಯವಿರುವುದಿಲ್ಲ ಹಾಗಿದ್ದ ಪಕ್ಷದಲ್ಲಿ ಪ್ರತಿ ನಾಲ್ಕು ತಿಂಗಳಿಗೊಮ್ಮೆ ಗುರು ಮತ್ತು ಶುಕ್ರ ಗ್ರಹಗಳು ಒಂದು ಸಾಲಿನಲ್ಲಿ ಬಂದಾಗಲೂ, ಸೂರ್ಯನಲ್ಲಿ ಅಲ್ಲೋಲ ಕಲ್ಲೋಲಗಳುಂಟಾಗಬೇಕು. ಅಲ್ಲದೆ ಗ್ರಹಗಳು ಒಂದಕ್ಕೊಂದು ಬಹಳ ದೂರದಲ್ಲಿರುವುದರಿಂದ ಅವುಗಳ ಆಕರ್ಷಣಾ ಶಕ್ತಿಯು ಸೂರ್ಯನನ್ನು ತಲುಪುವ ವೇಳೆಗೆ ಕುಂದಿರುತ್ತದೆ. ಹಾಗೆ ನೋಡಿದಲ್ಲಿ ಭೂಮಿಯು ಮತ್ತು ಶುಕ್ರನ ಪ್ರಭಾವವೇ ಸೂರ್ಯನ ಮೇಲೆ ಜಾಸ್ತಿ ಇರುತ್ತದೆ. ಏಕೆಂದರೆ ಈ ಗ್ರಹಗಳು ಸೂರ್ಯನಿಗೆ ಮಿಕ್ಕೆಲ್ಲ ಗ್ರಹಗಳಿಗಿಂತ ಸಮೀಪದಲ್ಲಿವೆ. ಅಲ್ಲದೆ 1982ರಲ್ಲಿ ಗ್ರಹಗಳೆಲ್ಲವೂ ಅಷ್ಟು ನಿಖರವಾಗಿ ಒಂದು ಸಾಲಿನಲ್ಲಿರುವುದಿಲ್ಲ. ಇವು 60° ಕೋನದಲ್ಲಿ ಆಕಾಶದಲ್ಲಿ ಹರಡಿರುತ್ತವೆ. ಅಲ್ಲದೇ ಸೂರ್ಯನ ಚಟುವಟಿಕೆ ಈಗಾಗಲೇ ಜಾಸ್ತಿಯಾಗಿದ್ದು ನಮ್ಮ ಮೇಲೆ ಈಗ ಅದರ ಪ್ರಭಾವ ಬೀರುತ್ತಲಿದೆ. ಆದುದರಿಂದ 1982ರಲ್ಲಿ ಗ್ರಹಗಳೆಲ್ಲವೂ ಒಂದೇ ಸಾಲಿನಲ್ಲಿ ಬಂದಾಗ್ಯೂ ಭಯಪಡಬೇಕಾದ ಪ್ರಮೇಯವಿಲ್ಲವೆಂಬುದು ಕೆಲವು ವಿಜ್ಞಾನಿಗಳ ಅಭಿಪ್ರಾಯ.

ಒಟ್ಟಿನಲ್ಲಿ 1982 ರ ನವಗ್ರಹಗಳ ಕೂಟದಲ್ಲಿ ಭೂಕಂಪನವಾಗುವುದು ನಿಶ್ಚಿತವೆಂದೂ ಮತ್ತು ಗ್ರಹಗಳ ಪ್ರಭಾವದಿಂದ ಸಮುದ್ರದ ಅಲೆಗಳು ಮಿತಿಮೀರಿ ಸಮುದ್ರದ ಆರ್ಭಟ ಎಲ್ಲೆ ಮೀರಿರುತ್ತದೆಂದೂ, ಭೂಮಿಯಲ್ಲಿ ಬಿರುಗಾಳಿಗಳು ಭಯಂಕರ

( 32 ನೇ ಪುಟ ನೋಡಿ )

# ವೀರಶೈವ ಪುಣ್ಯಪುರುಷರು - ೧

## ವಚನ ಗುಮ್ಮಟ ಡಾ. ಫ. ಗು. ಹಳಕಟ್ಟಿಯವರು

ದಿನಗಳುರುಳಿದಂತೆ ಮಠಮಾನ್ಯಗಳ ಗೂಡು ಸೇರಿ ಜನತೆಯ ಸಂಪರ್ಕವನ್ನು ಕಡಿದುಕೊಂಡ ವಚನಸಾಹಿತ್ಯವನ್ನು ಹುಡುಕಿ ತಂದು, ಪರಿಷ್ಕರಿಸಿ ಸಂಸ್ಕರಿಸಿ, ಬೆಳಕಿಗಿಟ್ಟ ಮಹಾಸಾಹಸಿ ವಚನ ಪಿತಾಮಹರೆಂದು ಹೆಸರಾದ ಲಿಂ। ಡಾ। ಫ. ಗು, ಹಳಕಟ್ಟಿಯವರ ಜನ್ಮ ಶತಮಾನೋತ್ಸವ ಒಂದು ಉಚಿತ ಪರಂಪರೆ. ಇಂತಹ ಒಬ್ಬ "ವಚನ ಪಿತಾಮಹ ಡಾ॥ ಫ. ಗು ಹಳಕಟ್ಟಿ ಜನ್ಮ ಶತಮಾನೋತ್ಸವ ಮತ್ತು ಕನ್ನಡ ಹಸ್ತಪ್ರತಿ ಶಾಸ್ತ್ರ ವಿಚಾರ ಸಂಕಿರಣ" ವಿಚಾರ ಪೂರಿತ ಲೇಖನಗಳೊಂದಿಗೆ 1981ನೆಯ ಏಪ್ರಿಲ್ 6 ಮತ್ತು 7 ರಂದು ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದ ವತಿಯಿಂದ ಜರಿಗಿದುದನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇವೆ.

ಶ್ರೀ ಎಸ್. ಎಸ್. ಭೂಶಗಡ್ಡಿ, M. A., B. Ed.

ಕನ್ನಡ ನಾಡಿನ ಪುಣ್ಯವೇ ಹಣ್ಣಾದಂತೆ ಜನ್ಮವೆತ್ತಿಬಂದ ಪುಣ್ಯ ಪುರುಷರ ವಿರಳ ಮಾಲಿಕೆಯಲ್ಲಿ ಡಾ॥ ಫ. ಗು. ಹಳಕಟ್ಟಿಯವರು ಅಪರೂಪದ ಮಹಾವ್ಯಕ್ತಿ ಶಕ್ತಿ. ಆಧುನಿಕ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಅವರ ಹೆಸರು ಚಿರಸ್ಮರಣೀಯ; ಅಸ್ಮರಣೀಯ. ನಮ್ಮ ಸಾಂಸ್ಕೃತಿಯ ಇತಿಹಾಸದಲ್ಲಿ ವಿನೂತನವಾದ ಅಧ್ಯಾಯವನ್ನೇ ನಿರ್ಮಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಮಾನವನು ಮನಸ್ಸು ಮಾಡಿದರೆ ಜೀವನದಲ್ಲಿ ಏನನ್ನು ಸಾಧಿಸಬಹುದೆಂಬುದಕ್ಕೆ ಅವರ ಜೀವನ ಚರಿತ್ರೆ ಒಂದು ನಿತಾಂತ ಉತ್ಕೃಷ್ಟ ಉದಾಹರಣೆ. ಜಗುಲಿಯ ಮೇಲೆಯೇ ಪೂಜೆಗೊಳ್ಳುತ್ತ ಹುಳಹತ್ತಿ ಹಾಳಾಗಿ ಹೋಗುತ್ತಿದ್ದ ಅಪೂರ್ವ ಜ್ಞಾನ ನಿಧಿಯಾದ ವಚನ ವಾಙ್ಮಯವನ್ನು ತಮ್ಮ ಸಂಪೂರ್ಣ ಜೀವನವನ್ನೇ ಅದಕ್ಕಾಗಿ ಅರ್ಪಿಸಿ ಉಳಿಸಿದ ಪ್ರಕಟಿಸಿದ ಮಹಾಮಹಿಮರು, ಒಂದರ್ಥದಲ್ಲಿ ಅರವತ್ತಾಲ್ಕನೆಯ ನೂತನ ಪುರಾತನರೂ ಅಹುದು. ಅವರು ಅಂದು ತಮ್ಮ ಜೀವನವನ್ನು ವಚನ ವಾಙ್ಮಯ ಪ್ರಸಾರಕ್ಕಾಗಿ ಮೀಸಲಿಡದೇ ಹೋಗಿದ್ದರೆ, ಕರ್ನಾಟಕದ ಬಹು ಅಮೂಲ್ಯವಾದ ಅಪರೂಪದ ಸಾಹಿತ್ಯ ಸಂಪತ್ತು ನಷ್ಟವಾಗಿ ಹೋಗುತ್ತಿತ್ತು. ವಚನ ವಾಙ್ಮಯ ಇಷ್ಟೊಂದು ಪ್ರಮಾಣದಲ್ಲಿ ಪ್ರಸಾರವಾಗುತ್ತಿದ್ದಿಲ್ಲ, ಪ್ರಚಾರವಾಗುತ್ತಿರಲಿಲ್ಲ. ಶರಣ-ಶರಣೆಯರ ಪಾವನಮಯ ಪುಣ್ಯ ಚರಿತ್ರೆಗಳು ಬೆಳಕಿಗೆ ಬರುತ್ತಿದ್ದಿಲ್ಲ. ಇಂದು ವೀರಶೈವಕ್ಕೆ ತನ್ನದೇ ಆದ ವೈಶಿಷ್ಟ್ಯಪೂರ್ಣ ಸಿದ್ಧಾಂತವಿದೆ; ಶ್ರೇಷ್ಠತಮ ತತ್ತ್ವ ಜ್ಞಾನವಿದೆ; ಉಜ್ವಲ

ಸಾಂಸ್ಕೃತಿಕ ಪರಂಪರೆ ಇದೆ; ಅಪೂರ್ವ ಉದಾತ್ತ ಸಾಹಿತ್ಯವಿದೆ; ಇತಿಹಾಸವಿದೆ. ಇಂದಿಗೂ ಈ ಧರ್ಮತತ್ತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ನಡೆ-ನುಡಿ ಒಂದಾದ ಧಾರ್ಮಿಕ ಮಹಾಪುರುಷರ ಚರಿತ್ರೆಗಳಿವೆ ಎಂದು ಧೈರ್ಯವಾಗಿ ಕೈಎತ್ತಿ ಹೇಳುವಂತಾಗಿದೆ. ಉದಾರ ಉನ್ನತ ಉದಾತ್ತ ತತ್ತ್ವಗಳಿಂದ ಕೂಡಿದ ಈ ಧರ್ಮ ವಿಶ್ವಧರ್ಮವಾಗಬಲ್ಲ ಅರ್ಹತೆ ಪಡೆದಿದೆಯೆಂದು ಹೇಳುವಂತಾಗಿದೆ ಇದರ ಸಂಪೂರ್ಣ ಯಶಸ್ಸು ಡಾ॥ ಫ. ಗು. ಹಳಕಟ್ಟಿಯವರಿಗೆ ಸಲ್ಲುತ್ತದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಅಂತೆಯೇ ಅವರು 'ವಚನ ಪಿತಾಮಹ'ರೆಂದು ಕರ್ನಾಟಕದಲ್ಲಿ ಮನೆಮಾತಾದರು. ಇಂದು ಯಾರೇ ಆಗಲಿ, ವೀರಶೈವ ಸಾಹಿತ್ಯ, ಸಂಸ್ಕೃತಿ, ಇತಿಹಾಸ, ತತ್ತ್ವಜ್ಞಾನ, ವಚನ ವಾಙ್ಮಯದ ಹಿರಿಮೆ ಗರಿಮೆಯನ್ನು ಕುರಿತು ಬರೆಯಬೇಕಾದರೆ, ಫ ಗು. ಹಳಕಟ್ಟಿಯವರನ್ನು ಸ್ಮರಿಸಬೇಕು. ಏಕಾಂಗ ವೀರರಾಗಿ ಮಹಾ ಸಾಹಸದಿಂದ ಅವರು ಅಂದು ಸಾಧಿಸಿದ ಸಿದ್ಧಿಸಿದ ಮಹಾ ಕಾರ್ಯವು ಇಂದಿನ ಯುವ ಜನಾಂಗಕ್ಕೆ ಸ್ಫೂರ್ತಿದಾಯಕ; ಚೈತನ್ಯದಾಯಕ. ಅವರ ಪಾವನಮಯ ಪುಣ್ಯಚರಿತ್ರೆ ಆದರ್ಶಮಯವೂ; ಅನುಕರಣೀಯವೂ ಆಗಿದೆ. ಅವರ ಬಂಗಾರ ಬದುಕಿನ ರೋಮಾಂಚಕ ಇತಿಹಾಸದ ಪುಟಗಳನ್ನೆ ಮತ್ತೆ ಮತ್ತೆ ತಿರುವಿ ಹಾಕಬೇಕಾಗಿದೆ. ಅದು ಅತ್ಯಾವಶ್ಯವೂ ಆಗಿದೆ ಇಂದು ಅವರ ಜನ್ಮ ಶತಮಾನೋತ್ಸವವನ್ನು ನಾಡಿನಾದ್ಯಂತವಾಗಿ ಅತ್ಯಂತ ವಿಜೃಂಭಣೆಯಿಂದ ಆಚರಿಸಲಾಗುತ್ತಿದೆ. ಅನೇಕ ಸಂಘ ಸಂಸ್ಥೆಗಳು ಅವರ ಜನ್ಮ ಶತಮಾನೋತ್ಸವವನ್ನು ವೈವಿಧ್ಯಮಯವಾಗಿ ಹಮ್ಮಿಕೊಂಡು ಅವರ ಜೀವನ ಸಾಧನೆ ಸಿದ್ಧಿಯ ಬಗೆಗೆ ವಿಚಾರ ಗೋಷ್ಠಿಗಳನ್ನು ಏರ್ಪಡಿಸಿ ಆ ದಿವ್ಯ ಆತ್ಮಕ್ಕೆ ಚಿರಶಾಂತಿಯನ್ನು ಕೋರುತ್ತಲಿವೆ. ನಾಡಿಮಟ್ಟದ ಮಹಾಪುರುಷರನ್ನು ನೆನೆಯುವುದು ಕೃತಜ್ಞ ಜನಾಂಗದ ಜೀವಂತ ಲಕ್ಷಣ, ಕರ್ನಾಟಕದ ಸಂಸ್ಕೃತಿಯ ತಿರುಳು ಡಾ॥ ಫ. ಗು. ಹಳಕಟ್ಟಿಯವರಂತಹ ಅದಮ್ಯ ಮಹಾಚೇತನ ಯುಗಕ್ಕೊಮ್ಮೆ ಜನ್ಮವೆತ್ತುವುದು. ಇಂಥ ಮಹಾಚೇತನಗಳು ಆಗಾಗ ಕಾಣಿಸಿಕೊಂಡು ಮಬ್ಬಿನ ಮುಸುಕಿನಲ್ಲಿ ಮಲಗಿದ ಜನಾಂಗವನ್ನು ಜಾಗೃತಗೊಳಿಸಬೇಕಾಗಿದೆ.

ಡಾ॥ ಫ. ಗು ಹಳಕಟ್ಟಿಯವರು ದಿನಾಂಕ ೨-೭-೧೮೮೦ರಂದು ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಎನಿಸಿದ ಧಾರವಾಡದಲ್ಲಿ ಗುರುಬಸಪ್ಪ–ದಾನಮ್ಮನವರ ಪುಣ್ಯಗರ್ಭದಲ್ಲಿ ಜನ್ಮವೆತ್ತಿದರು. ತಂದೆ ಗುರುಬಸಪ್ಪನವರು ಪ್ರಾಥಮಿಕ ಶಾಲಾ ಶಿಕ್ಷಕರ; ಉತ್ಕಟ ವಿದ್ಯಾಭಿಮಾನಿಗಳು; ಉತ್ತಮ ಲೇಖಕರು. ಅಂತೆಯೇ ಫಕೀರಪ್ಪನವರಿಗೆ ಸರಿಯಾದ ಶಿಕ್ಷಣ ದೊರೆಯಿತು; ಉತ್ತಮ ಸಂಸ್ಕಾರ ಪಡೆದರು. ಪ್ರಾಥಮಿಕ ಮಾಧ್ಯಮಿಕ ಶಿಕ್ಷಣವನ್ನು ಧಾರವಾಡದಲ್ಲಿಯೇ ಉತ್ತಮ ರೀತಿಯಲ್ಲಿ ಪೂರ್ತಿಗೊಳಿಸಿದರು. ೧೯೦೧ರಲ್ಲಿ ಮುಂಬಯಿ ಸೇಂಟ ಝೇವಿಯರ್ ಕಾಲೇಜಿನಿಂದ ಬಿ.ಎ.

ಪದವಿ ಪಡೆದರು. ೧೯೦೮ರಲ್ಲಿ ಎಲ್. ಎಲ್. ಬಿ. ಪದವಿ ಗಳಿಸಿದರು. ಮೊ ಮೊದಲು ಬೆಳಗಾವಿಯಲ್ಲಿ ತಮ್ಮ ವಕೀಲ ವೃತ್ತಿ ಪ್ರಾರಂಭಿಸಿದರು. ಅಲ್ಲಿಯ ಪ್ರ ಕೂಲ ಹವಾಮಾನದಿಂದ ತಡೆದುದ್ದರಿಂದಲೋ ಏನೋ ಮುಂದೆ ವಿಜಾಪುರಕ್ಕೆ ಬದಲಾಯಿಸಿದರು. ಅದುವೇ ಅವರ ಕಾರ್ಯಕ್ಷೇತ್ರದ ತಾಣವಾಯಿತು. ಈ ಪೂರ್ವ ದಲ್ಲಿ ಒಂದು ಮಹತ್ವದ ಘಟನೆಯೊಂದು ನಡೆಯಿತು. ಪದವೀಧರರಾದ ಶ್ರೀ ಪಕ ರಪ್ಪನವರನ್ನು ಅವರ ಆತ್ಮೀಯರೊಬ್ಬರು ಭೋಜನ ಸಮಾರಂಭಕ್ಕೆ ಆಮಂತ್ರಿಸಿದ್ದರು ಅಲ್ಲಿಯ ಒಂದು ಕೋಣೆಯಲ್ಲಿ ತಾಡ ಓಲೆಯ ಒಂದು ಕಟ್ಟು ಕಣ್ಣಿಗೆ ಬಿತ್ತು. ಅವ ಕುತೂಹಲ ಕೆರಳಿಸಿತು. ದುಂಡು ದುಂಡಾದ ಅಕ್ಷರಗಳು ಅವರ ಮನಸ್ಸನ್ನು ಸೆ ಹಿಡಿದವು. ಅವರ ಎಳೆಯ ಕೋಮಲ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವ ಬೀರಿತು. ಆ ಕಟ್ಟು ಮತ್ತೇನೂ ಆಗಿರದೆ; ಅದು ಗುಬ್ಬಿ ಮಲ್ಲಣಾರ್ಯರ ಗಣ ಭಾಷ್ಯರತ್ನಮಾಲೆಯಾಗಿತ್ತು. ಊಟದ ಪರಿವೆ ಮರೆತು ಅದರಲ್ಲಿಯೇ ಅವರ ಮನ ಮಗ್ನವಾಯಿತು. ಅದೊಂದು ನಿಜವಾಗಿಯೂ ಅವರ ಜೀವನದಲ್ಲಿ ರಸಗಳಿಗೆ!! ಶುಭಗಳಿಗೆ!! ಅಂದಿನಿಂದ ಈ ಬಗೆಯ ತಾಡ ಓಲೆಗಳನ್ನು ಸಂಗ್ರಹಿಸುವ ಹುಚ್ಚು ಬೆಳೆಯಿತು; ಅವುಗಳನ್ನು ಓದುವ ಪ್ರವೃತ್ತಿ ಹೆಚ್ಚಾಯಿತು. ವೃತ್ತಿಯಿಂದ ವಕೀಲ ರಾದರೂ; ಪ್ರವೃತ್ತಿಯಿಂದ ಸಾಹಿತ್ಯ ಸೇವಕರಾದರು. ಶ್ರೇಷ್ಠ ಸಮಾಜ ಸೇವಕರಾ ದರು; ಸಂಘ ಸಂಸ್ಥೆಗಳ ಸ್ಥಾಪಕರಾದರು; ಉತ್ತಮದಕ್ಷ ಪತ್ರಿಕೋದ್ಯಮಿಗಳಾದರು; ಸಹಕಾರಿ ಬ್ಯಾಂಕು ತೆಗೆದು ರೈತರ ಏಳ್ಗೆಗೆ ಕಾರಣರಾದರು.

ಈ ಮೊದಲೇಪ್ರಸ್ತಾಪಿಸಿದಂತೆ ೧೯೦೮ರಿಂದ ಪ್ರಾರಂಭವಾದ ಅವರ ತಾಡ ಓಲೆಗಳ ಸಂಗ್ರಹ ಪ್ರವೃತ್ತಿಯ ಫಲವಾಗಿ ೧೯೩೦ರ ಸುಮಾರಿಗೆ ಒಂದು ಸಾವಿರಕ್ಕೂ ಮಿಕ್ಕ ಕೃತಿಗಳು ಕೈಗೆ ಬಂದವು. ಊರೂರಿಗೆ ಸಂಚರಿಸಿದರು; ಪ್ರತಿಗಳು ಇದ್ದವರಿಗೆ ಸರಿಯಾದ ತಿಳುವಳಿಕೆ ಕೊಟ್ಟರು. ಕೊಡದವರಿಗೆ ಬೇಡಿದಷ್ಟು ಹಣವನ್ನು ತೆತ್ತು ಪಡೆದುಕೊಂಡರು. ಅದೊಂದು ಮಹಾಸಾಹಸದ ಕೆಲಸ. ಅವುಗಳ ಪ್ರದರ್ಶನವನ್ನು ಏರ್ಪಡಿಸಿ ಜನರಿಗೆ ಸರಿಯಾದ ತಿಳುವಳಿಕೆ ಮಾಡಿಕೊಟ್ಟರು. ಆಗಲೇ ಅವುಗಳ ಅಭ್ಯಾಸವನ್ನು ಸಕ್ರಮವಾಗಿ ಮಾಡಿದರು. ೧೯೩೧ರ ಸುಮಾರಿಗೆ ವಚನ ಸಾಹಿ ತ್ಯದ ಬಗೆಗೆ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಾತನಾಡಿದರು. ಆಗ ಸಮಗ್ರ ಕನ್ನಡ ನಾಡಿನ ವಿದ್ವಾಂಸರ ಗಮನ ವಚನಸಾಹಿತ್ಯದ ಕಡೆಗೆ ಎಳೆಯಿತು. ವಚನ ಸಾಹಿತ್ಯದ ಮೌಲಿಕತೆಯ ಅರಿವಾಗಿ ದಿ॥ ಎಂ. ಆರ್. ಶ್ರೀನಿವಾಸಮೂರ್ತಿ, ದಿ॥ ಡಿ. ವಿ. ಜಿ., ದಿ॥ ಅ. ನ ಕೃ., ದಿ॥ ಬೆನಗಲ್ಲ ರಾಮರಾವ್, ಲಿಂ॥ ಬಸವನಾಳ ಡಾ॥ ಕಲಕಾ, ದಿವಾಕರ ಮೊದಲಾದವರು ವಚನಸಾಹಿತ್ಯದ ಆಳವಾದ ಅಭ್ಯಾಸ ಮಾಡಿ ಕೃತಿ ರಚಿಸಿದರು. ಅಂದಿನಿಂದ ವಚನಸಾಹಿತ್ಯದ ಬಗೆಗೆ ವಿಚಾರ-ವಿಮರ್ಶೆ ಆರಂಭವಾಯಿತು. ತಾಡೋಲೆಗಳಲ್ಲಿ ಅಡಗಿರುವ ಕೃತಿಗಳನ್ನು ಅಚ್ಚು ಮಾಡಲು

ತಮ್ಮ ಸ್ವಂತ ಮನೆಯನ್ನು ಮಾರಿ 'ಹಿತಚಿಂತಕ' ಪ್ರೆಸ್ಸು ಪ್ರಾರಂಭಿಸಿದರು. ಕೊನೆಯವರೆಗೂ ಅದು ನಾಡಿನ ಹಿತ ಚಿಂತನೆಯನ್ನು ಮಾಡುವ ಉತ್ತಮೋತ್ತಮ ಕೃತಿಗಳನ್ನು ಅಚ್ಚುಮಾಡಿತು. ೧೯೨೭ರಿಂದ ಶಿವಾನುಭವ ತ್ರೈಮಾಸಿಕ ಹೊರಡಿಸಿದರು. ಮುಂದೆ ಅದು ಮಾಸಪತ್ರಿಕೆಯಾಗಿ ೩೫ ವರುಷಗಳವರೆಗೆ ಸತತವಾಗಿ ಪ್ರಕಟವಾಯಿತು. ಈ ಪತ್ರಿಕೆಯಲ್ಲಿ ಇತರ ಲೇಖಕರಿಗೆ ಅವಕಾಶ ಮಾಡಿಕೊಟ್ಟಿತು. ಅಂತೆಯೇ ಈ ಪತ್ರಿಕೆ ಉದಯೋನ್ಮುಖ ಲೇಖಕರಿಗೆ ಒಂದು ಗರಡಿ ಮನೆಯಾಯಿತು. ಈ ಮೂಲಕವೇ ಅನೇಕರು ಇಂದು ಶ್ರೇಷ್ಠ ಸಾಹಿತಿಗಳಾಗಿ ಹೆಸರುವಾಸಿಯಾಗಿದ್ದಾರೆ. ಶಿವಾನುಭವ ಗ್ರಂಥಮಾಲೆಯಿಂದ ನೂರಕ್ಕೂ ಮಿಕ್ಕ ಕೃತಿಗಳು ಅರಳಿವೆ. ಸುಗಂಧವನ್ನು ಸೂಸಿವೆ; ವಚನ ಸಾಹಿತ್ಯದ ವ್ಯಾಪ್ತಿಯನ್ನು ಹರಡಿವೆ. ತಾಡೋಲೆಗಳು ಸಿಕ್ಕಂತೆ ಅವುಗಳನ್ನು ಪ್ರತಿ ಮಾಡಲು ಹಣ ಕೊಟ್ಟು ಬರಹಗಾರರನ್ನು ನೇಮಿಸಿದರು. ಸಿದ್ಧವಾದ ಹಸ್ತಪ್ರತಿಯನ್ನು ಮೂಲ ಪ್ರತಿಯೊಂದಿಗೆ ಹೋಲಿಸಿ, ಟೀಕೆ-ಟಿಪ್ಪಣಿ ಬರೆದು ಅವುಗಳನ್ನು 'ಶಿವಾನುಭವ' ಪತ್ರಿಕೆಯ ಮುಖಾಂತರ ಪ್ರಕಟಿಸಿ, ನಂತರ ಪ್ರತ್ಯೇಕ ಗ್ರಂಥಗಳನ್ನು ಹೊರತರುತ್ತಿದ್ದರು. ಅಭ್ಯಾಸಿಗಳಿಗೆ ಉಪಯುಕ್ತವಾಗುವಂತೆ ಪ್ರಸ್ತಾವನೆಯನ್ನು ಬರೆಯುತ್ತಿದ್ದರು. ಅವುಗಳಿಗೆ ಸುಲಭವಾದ ಬೆಲೆಯನ್ನು ಇಡುತ್ತಿದ್ದರು. ವೀರಶೈವ ಧಾರ್ಮಿಕ ಗ್ರಂಥಗಳಲ್ಲಿಯೇ ಶಿರೋರತ್ನವೆಂದರೆ- ಶೂನ್ಯಸಂಪಾದನೆ. ಅದು ಪ್ಲೇಟೋ ಸಾಕೆಟೀಸನಸಂವಾದ ಗ್ರಂಥಗಳಿಗೆ ಸಮಾನವಾದುದು. ಈ ಐತಿಹಾಸಿಕ ಗ್ರಂಥವನ್ನು ಮೊಟ್ಟಮೊದಲು ಬೆಳಕಿಗೆ ತಂದವರೇ ಫ. ಗು. ಹಳಕಟ್ಟಿಯವರು (೧೯೩೦). ಇದರೊಂದಿಗೆ ಓದುಗರಿಗೆ ಸುಲಭವಾಗಿ ತಿಳಿಯಬೇಕೆಂಬ ಹೆಬ್ಬಯಕೆಯಿಂದ ಸಟೀಕ ಶೂನ್ಯ ಸಂಪಾದನೆ (ತೃತೀಯೋಪದೇಶ, ಸಿದ್ಧರಾಮನ ಸಂಪಾದನೆ) ಸಟೀಕ ಶೂನ್ಯಸಂಪಾದನೆ (ಸಿದ್ಧರಾಮ, ಗುರುಶರಣ, ದಶಮೋಪದೇಶ,) ಹೀಗೆ ಬಿಡಿ ಬಿಡಿ ಸಂಕಲನಗಳನ್ನೂ ಬೆಳಕಿಗೆ ತಂದದುಂಟು. ಈ ಗ್ರಂಥದ ಮಹತ್ವದ ಬಗೆಗೆ ಬರೆದ ಪ್ರಸ್ತಾವನೆ ಶೂನ್ಯಸಂಪಾದನೆ ಸುಲಭವಾಗಿ ಮೋಸಗೊಳಿಸುವ ಶ್ರೇಷ್ಠ ಕೃತಿಯೆಂದು ಚಮತ್ಕಾರಿಕವಾಗಿ ಮಾತನಾಡಿದ 'ಶಂಭಾ' ರ ಕಣ್ಣು ತೆರೆಸುವಂತಿದೆ.

ಡಾ॥ ಫ. ಗು. ಹಳಕಟ್ಟಿಯವರು ಮಾಡಿದ ಇನ್ನೊಂದು ಮಹಾಕಾರ್ಯವೆಂದರೆ ವಚನಶಾಸ್ತ್ರಸಾರದ ನಾಲ್ಕು ಸಂಪುಟಗಳನ್ನು ಮೂರು ಭಾಗಗಳಾಗಿ ಪ್ರಕಟಿಸಿದುದು. ಇವು ಅವರ ಮಹಾಗ್ರಂಥಗಳು. ಕನ್ನಡಿಗರ ಕಣ್ಮಣಿಗಳು. ಅವು ಇಂದಿಗೂ ಸಂದರ್ಭ ಗ್ರಂಥಗಳಾಗಿವೆ. ಸುಮಾರು ಹದಿನಾರು ವರುಷಗಳ ಸುದೀರ್ಘ ಸಾಹಿತ್ಯತಪಸ್ಸಿನಿಂದ ಹೊರಬಂದ ೧೯೦೦ ಪುಟಗಳ ಈ ಕೃತಿರತ್ನಗಳನ್ನು ಸಂಪಾದಿಸಿ, ಸೂಕ್ತ ವಿಸ್ತಾರವಾದ ಪ್ರಸ್ತಾವನೆಯನ್ನು ಬರೆದು ಪ್ರಕಟಿಸಿದರು. ಈ ಗ್ರಂಥಗಳನ್ನು ಓದಿದವರಿಗೆ ಮಾತ್ರ ಡಾ॥ ಫ. ಗು. ಹಳಕಟ್ಟಿಯವರ ಅಪಾರ ಪರಿಶ್ರಮ, ಅವರು ಪಟ್ಟ ತೊಂದರೆಗಳ ಪರಿಚಯವಾಗುತ್ತದೆ. ಈ ಗ್ರಂಥಗಳಲ್ಲಿ ವೀರಶೈವಧರ್ಮದ ವೈಶಿಷ್ಟ್ಯಗುಣ

ವಿಶೇಷಗಳನ್ನು, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಳ, ಸೃಷ್ಟಿಯ ರಚನೆ ಮೊದಲಾದ ಮಾಲಿಕೆವಿಚಾರ–ವಿಮರ್ಶೆ ಮನೋಜ್ಞವಾಗಿದೆ, ಮನಮುಟ್ಟುವಂತಿದೆ, ಶಾಸ್ತ್ರೀಯಗಿವಾದೆ, ತರ್ಕಬದ್ಧವಾಗಿದೆ. ಇಂದಿಗೂ ಅವರು ರಚಿಸಿದ 'ಶಿವಾನುಭವಕೋಶ' ನಮಗೆ ಆಧಾರಗ್ರಂಥವಾಗಿದೆಯೆಂದರೆ, ಅದರ ಮಹತ್ವ ತಿಳಿಯದಿರದು. ಅಂತೆಯೇ ಕವಿ ಕಣವಿಯವರ ಕವನದಲ್ಲಿ ಅವರ ವ್ಯಕ್ತಿ ಚಿತ್ರ ಸಹಜವಾಗಿ ಮೂಡಿಬಂದಿದೆ. ಅದು ಹೀಗಿದೆ.

"ಯಾವುದೋ ಅಮೃತಗಳಿಗೆ, ನಿಮ್ಮ ದೃಷ್ಟಿಗೆ ಬಿತ್ತು
ಹೂತಿಟ್ಟ ಹೊನ್ನಗಣಿ! ತೋಡಿದಿರಿ ಹಗಲಿರುಳು
ಮೈಮರೆತು, ಹೊರದೆಗಿದಿರಿ ಹೇರಿದಿರಿ ಬಂಡಿ ಬಂಡಿ
ಚಿನ್ನದ ಅದಿರು, ಹಿಂಗಿತು ಹಸಿವು ನೀರಡಿಕೆ"

ಈ ನಾಲ್ಕು ಚರಣಗಳು ಹಳಕಟ್ಟಿಯವರ ವಚನ ಸಾಹಿತ್ಯದ ಹೊನ್ನಗಣಿಯನ್ನು ತೋಡಿದ, ಅಲ್ಲಿ ಬಂಡಿ ಬಂಡಿ ಚಿನ್ನದ ಅದಿರನ್ನು ಹೊರತೆಗೆದ ವಿಷಯವನ್ನು ಅರ್ಥವತ್ತಾಗಿ ಕಾವ್ಯಮಯವಾಗಿ ಸೂಚಿಸುತ್ತದೆ. ವಚನಸಾಹಿತ್ಯ ಕನ್ನಡದ ಅಮೂಲ್ಯ ಸುವರ್ಣನಿಧಿ ನಿಧಿಗೆ ಕನ್ನಡ ಕುಲವೆಲ್ಲ ಕಿವಿಗೊಟ್ಟಿತು. ಬೆಳಕಿನೆಚ್ಚರ ಪಡೆಯಿತು. ಅನುಭವ ಮಂಟಪದ ಮಾಣಿಕ್ಯ ದೀಪ್ತಿ ಕಂಡದ್ದು ನಡೆಯು ನುಡಿಯು ಜ್ಯೋತಿರ್ಲಿಂಗದ ದರ್ಶನವಾದದ್ದೂ ಆಗಲೇ ಹಳಕಟ್ಟಿಯವರು ಇಷ್ಟೆಲ್ಲ ಮಾಡಿದರೂ 'ತನ್ನರಿವೆ ಗುರು' ಎಂದು ವಚನ ಕೊಟ್ಟವರು.

"ರುಮಾಲದ ಕಟ್ಟು ಬಿಚ್ಚಿಲ್ಲ ತೆಗೆದಿಲ್ಲ ಇಟ್ಟ
ಕನ್ನಡಕ ಉಡುಗಿಲ್ಲ ಉಟ್ಟದೋತರ ಮಡಿಯು
ಮೆಲುದನಿ-ಮಾತು ಭಕುತಿ ಬಳ್ಳಿಗೆ ಬಿಟ್ಟಕುಡಿಯು
ಗೋಳ–ಗುಮ್ಮಟ ತಾನೆ ತಲೆಬಾಗಿಸಿತು ನಿಮಗೆ,
ಏಳು ಸಲ ಕರೆದರೂ ಎಚ್ಚರಾಗದು ನಮಗೆ"

ಮೇಲಿನ ಮುಕ್ತಕಗಳಲ್ಲಿ ಅವರ ವ್ಯಕ್ತಿತ್ವದ ಸ್ಫುಟ ಚಿತ್ರ ಸುಂದರ ಬಂಧುರ ಶಬ್ದ ಚಿತ್ರವಾಗಿ ಮೂಡಿ ಬಂದಿದೆ. 'ತಾಳ್ಮೆ ಸಂಯಮಗಳ ಸುಂದರ ಸಮ್ಮಿಳನವಾದ ತೆಳುದೇಹ, ಸಂಸ್ಕೃತಿಯ ಹಿರಿಮೆ–ಗರಿಮೆಯನ್ನೇ ಬೀರುವ ಬಿಳಿಯ ರುಮಾಲು, ಸಾಲಾಗಿ ಬರುವ ಕಷ್ಟಗಳಿಗೆ ಒಂದಿಷ್ಟೂ ವಿಚಲಿತವಾಗದ ಶಾಂತಮುಖ ಮುದ್ರೆ. ಹಗಲಿರುಳು ಸತ್ಯ ಸಂಶೋಧನೆಯನ್ನೇ ಸೂಸುವ ಬಿಳಿ ಪಂಚೆ, ವಕೀಲ ವೃತ್ತಿಯನ್ನೇ ಎತ್ತಿ ತೋರಿಸುವ ಕಂದು ಬಣ್ಣದ ಉಲನ್ ಕೋಟು, ವಚನ ಸಾಹಿತ್ಯದ ಶ್ರೇಷ್ಠತ್ಯಕ್ಕಾಗಿ ನಿಂತ ಎತ್ತರದ ನಿಲವು ಪ್ರೊ. ಸಿ. ಎಸ್ ಹಿರೇಮಠ ರವರ ವರ್ಣನೆ. ಇಂಥ ವಚನ ಶ್ಯಾಸ್ತ್ರ ಪಿತಾಮಹರೆಂದು ಹೆಸರಾದ ಡಾ. ಫ ಗು. ಹಳಕಟ್ಟಿಯವರ

ನ್ಮಶತಮಾನೋತ್ಸವ ಒಂದು ಉಚಿತ ಪರಂಪರೆಯೆನ್ನುವುದರಲ್ಲಿ ಔಚಿತ್ಯವಿದೆ.

**ಮುತ್ತುಗಳು**

ಡಾ॥ ಫ. ಗು. ಹಳಕಟ್ಟಿಯವರು ಅಲ್ಲಲ್ಲಿ ಮಾತನಾಡಿದ ಮಾತುಗಳು ಮನ ಯವಾಗಿವೆ. "ಸಂಸ್ಕೃತಿಯ ಪ್ರಸಾರದಿಂದಲೇ ವೀರಶೈವದ ಮೇಲ್ಮೆಯು ಇರು ದೆ. ಆದರೆ ಈ ಕಾರ್ಯವು ತ್ವರಿತಗತಿಯಿಂದ ಸಾಗಬೇಕಾದರೆ ಸಮಾಜದವರ ಪೂರ್ಣ ಬೆಂಬಲವೂ ವಿದ್ವಜ್ಜನರ ಪರಿಶ್ರಮವೂ ಅವಶ್ಯವಾದವು".

"ವೀರಶೈವ ಸಮಾಜದಲ್ಲಿ ದೊಡ್ಡ ದೊಡ್ಡ ಉತ್ಪನ್ನವುಳ್ಳ ಮಠಗಳು ಅನೇಕ ಾಗಿವೆ. ಅವುಗಳಿಗೆ ನಡೆದುಕೊಳ್ಳುವ ಶಿಷ್ಯರೂ ಅಸಂಖ್ಯಾತರಾಗಿದ್ದಾರೆ. ಹಾಗೆಯೇ ೀರಶೈವ ಸುಶಿಕ್ಷಿತರೂ ಈಗ ಬಹುಜನರು ಹೊರಬಿದ್ದಿದ್ದಾರೆ. ಧಾರ್ಮಿಕ ಪಾಠ ಾಲೆಗಳೂ ಅನೇಕವಿದ್ದು ಅವುಗಳಿಗೆ ಬಹು ಹಣ ವೆಚ್ಚವಾಗುತ್ತದೆ. ಆದರೆ ಸಮಾ ದ ಸಂಸ್ಕೃತಿಯನ್ನು ಹೆಚ್ಚಿಸಿ ಒಂದು ಮಹತ್ವದ ಕ್ರಾಂತಿ ಮಾಡಿದ ಒಂದು ಶ್ರೇಷ್ಠ ಾಙ್ಮಯವನ್ನು ಕಾದಿಡಲು ಪ್ರಯತ್ನ ಸಾಗದೆ ಇದ್ದದ್ದಕೋಸ್ಕರ ನಾವು ಅತ್ಯಂತ ಂತಪಿಸಬೇಕಾಗಿದೆ".

"ಸಮಾಜದಲ್ಲಿ ಅಲ್ಪರು ಭಕ್ತಿಮಾರ್ಗಕ್ಕೆ ಒಲಿದವರುಂಟು. ಬೇರೆ ಕೆಲವರು ಜ್ಞಾನಮಾರ್ಗಕ್ಕೆ ಮತ್ತು ಇನ್ನುಳಿದವರು ಕರ್ಮಮಾರ್ಗಕ್ಕೆ, ಹೀಗೆ ಅನೇಕ ಮಾರ್ಗ ಗಳಿಗೆ ಒಲಿದವರಿರುತ್ತಾರೆ. ಆದರೆ ಈ ಎಲ್ಲ ಮಾರ್ಗಗಳು ವೀರಶೈವ ಧರ್ಮದಲ್ಲಿ ಸಮಾವೇಶ ಮಾಡಲ್ಪಟ್ಟಿರುತ್ತದೆ. ಅವರ ಷಟ್‌ಸ್ಥಳ ಶಾಸ್ತ್ರವು ಇವೆಲ್ಲವುಗಳನ್ನು ಒಳಗೊಂಡಿರುತ್ತದೆ. ಆದರಲ್ಲಿ ಕ್ರಿಯೆ, ಜ್ಞಾನ, ಭಕ್ತಿ, ಯೋಗ ಇವುಗಳು ಅಡಕ ವಾಗಿರುತ್ತವೆ. ಈ ಬಗೆಯ ರಚನೆಯು ಯಾವ ಧರ್ಮದಲ್ಲಿ ಇದೆಯೋ ಅದು ವಿಶ್ವ ಧರ್ಮವಾಗಲು ಅರ್ಹವಾಗುತ್ತದೆ".

"ಲಿಂಗಾಯತ ಧರ್ಮವು ಬಹುಜನ ಸಮಾಜವನ್ನು, ಉಚ್ಚ ನೀಚ ಭಾವ ವನ್ನು ಎಳ್ಳಷ್ಟಾದರೂ ಮನಸ್ಸಿನಲ್ಲಿ ತಾರದೆ ಮೇಲಕ್ಕೆಬ್ಬಿಸಲು ಮುಂದೊರೆದಿದ್ದರು ತ್ತದೆ. ಈ ಪ್ರಯತ್ನದಲ್ಲಿ ಅದು ಯಾವ ತರದ ಅಸಾಧು ಮಾರ್ಗವನ್ನು ಸ್ವೀಕರಿಸ ಲಿಲ್ಲ. ಜನರಲ್ಲಿ ಭಕ್ತಿ, ನೀತಿ, ತಿಳವಳಿಕೆ ಇವುಗಳನ್ನು ಹಬ್ಬಿಸಲಿಕ್ಕೆ ಯತ್ನಿಸಿ ಈ ಮಾರ್ಗದಿಂದಲೇ ಸಮಾಜದಲ್ಲಿ ಅತ್ಯುಚ್ಚ ಭಾವವನ್ನು ನೆಲೆಗೊಳಿಸಿರುತ್ತದೆ."

**ರಸನಿಮಿಷಗಳು–ವಿಷನಿಮಿಷಗಳು**

ಡಾ॥ ಫ. ಗು. ಹಳಕಟ್ಟಿಯವರದು ಸರಳ ಜೀವನ, ಉದಾತ್ತ ಭಾವನೆ, ಅಂತೆಯೇ ಬಡತನದ ಬೇಗೆಯಿಂದ ಬೆಂದವರು. ಆದರೂ ಆಗಾಗ ಆನಂದದ ಮಿಂಚು ಗಳು ಅವರ ಬಾಳಿನಲ್ಲಿ ಹೊಳೆದುಹೋಗಿವೆ. ಅವರ ಸಾಹಿತ್ಯ ಸೇವೆಯನ್ನು ಮನ್ನಿಸಿ

ಕರ್ನಾಟಕ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟು ಪದವಿ ನೀಡಿತು (೧೯೫
ಮಹಾಜನರಂತೂ 'ವಚನ ಪಿತಾಮಹ'ರೆಂದು ಅಚ್ಚುಮೆಚ್ಚಿನಿಂದ ಕರೆಯಿತು.
ಕಾರವೂ ರಾವಬಹಾದ್ದೂರ ಪದವಿ ನೀಡಿತು. ಕ್ರಿ.ಶ. ೧೯೨೬ರಲ್ಲಿ ಬಳ್ಳಾರಿಯ
ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ವಿದ್ವತ್ಪೂರ್ಣ ಭಾಷಣ ಮಾ
ಜನತೆಗೆ ಸೂಕ್ತ ಮಾರ್ಗದರ್ಶನ ಮಾಡಿದರು. ಬಿಜಾಪುರದ ಬರಗಾಲವನ್ನು ಶಾಶ್ವ
ವಾಗಿ ನಿವಾರಿಸಲು ಪ್ರಯತ್ನಿಸಿದರು. ೧೯೧೦ರಲ್ಲಿ ಬಿಜಾಪುರ ಜಿಲ್ಲಾ ಲಿಂಗಾಯ
ವಿದ್ಯಾಭಿವೃದ್ಧಿ ಸಂಸ್ಥೆಯನ್ನು ಸ್ಥಾಪಿಸಿದರು. ೧೯೧೪ರಲ್ಲಿ ಸಿದ್ಧೇಶ್ವರ ಹೈಸ್ಕೂ
ಪ್ರಾರಂಭಿಸಿದರು. ೧೯೧೮ರಲ್ಲಿ ಸಿದ್ಧೇಶ್ವರ ಸಹಕಾರಿ ಬ್ಯಾಂಕನ್ನು ತೆರೆದರು. ೧೯
ರಲ್ಲಿ ಮುಂಬಯಿ ವಿಶ್ವ ವಿದಾಲ್ಯಯದ ಸೆನೇಟರು ಆಗಿದ್ದರು. ಅ. ಭಾ. ವೀರಶೈ
ಮಹಾಸಭೆಯ ಅಧ್ಯಕ್ಷರೂ ಆಗಿದ್ದರು. ಹೀಗೆ ಬಹುಮುಖಸೇವೆ ಸಲ್ಲಿಸಿದ
ಮಹಾಮಹಿಮನಿಗೆ ಒಂದು ಸಲ ಮನೆಯಲ್ಲಿ ಹಿಡಿ ಧಾನ್ಯವಿರಲಿಲ್ಲ. ಅದನ್ನ
ತಿಳಿದು ಬಬಲೇಶ್ವರ ಸ್ವಾಮಿಗಳು ಗೋಧಿ, ಜೋಳ, ಹಣ ಕಳಿಸಿದರೆಂದು ಕೇಳುತ್ತೇ
೪೦ ವರ್ಷ ಒಂದೇ ಕೋಟನ್ನು ಹಾಕಿದರು. ಸ್ವಂತ ಜೀವನದ ನೋವನ್ನು ಮರೆ
ಸಮಾಜದ ಏಳ್ಗೆಗಾಗಿ ತಮ್ಮ ಜೀವನವನ್ನು ಗಂಧದಂತೆ ತೆಯ್ದರು, ಊದುಬ
ಯಂತೆ ಸುಟ್ಟುಕೊಂಡರು. ವಚನ ಸಾಹಿತ್ಯ ಸಾಗರದಲ್ಲಿ ಸದಾನಂದ ಪಡೆದರು
ಅವರು ವಚನಗಳನ್ನು ಆಂಗ್ಲಭಾಷೆಯಲ್ಲಿ ಅನುವಾದಿಸಿದರು. ಒಂದು ಸಲ ಆಷ್ಟ್ರೇ
ಯಾದ ಮಹಿಳೆಯೊಬ್ಬಳು ವಿಜಾಪುರದ ಐತಿಹಾಸಿಕ ಕಟ್ಟಡವನ್ನು ನೋಡಲ
ಬಂದಾಗ ಡಾ. ಹಳಕಟ್ಟಿಯವರನ್ನೂ ಕಂಡರು. ಆಗ ಅವರಿಗೆ ವಚನಗಳನ
ಭಾಷಾಂತರಿಸಿದ ಪುಸ್ತಕವನ್ನು ಕೊಟ್ಟರು. ಮೂರನೇ ದಿನ ಆ ಮಹಿಳೆ ಮುದ್ರಣಾ
ಲಯಕ್ಕೆ ಮತ್ತೆ ಬಂದು ಆ ಪುಸ್ತಕವನ್ನು ತಲೆಯ ಮೇಲೆ ಇರಿಸಿಕೊಂಡು ಮಗುವಿ
ನಂತೆ ಕುಣಿದಳಂತೆ ! ಆಗ ವಚನ ಪಿತಾಮಹನ ಕಣ್ಣು ತೇವಗೊಂಡುವಂತೆ !!

ಡಾ॥ ಫ. ಗು. ಹಳಕಟ್ಟಿಯವರ ಸ್ಥಿತಪ್ರಜ್ಞೆಗೆ ಇನ್ನೊಂದು ನಿಕಾಂತ ನಿದರ್ಶ
ವೆಂದರೆ ಅವರ ಮೇಧಾವಿ ಮಗ ಚಂದ್ರಶೇಖರ ಆಕಸ್ಮಿಕವಾಗಿ ತೀರಿ ಹೋದಾ
ತಮ್ಮ ದಿನ ನಿತ್ಯದ ಕೆಲಸಗಳನ್ನು ಪೂರ್ತಿ ಮಾಡಿದ ನಂತರವೇ ದಿಲ್ಲಿಗೆ ಹೊರಟರಂತೆ
ಅಲ್ಲಿ ಚಂದ್ರಶೇಖರನ ಅಂತ್ಯಕ್ರಿಯೆ ಮುಗಿದಿತ್ತು. ಆದರೆ ಓದುಗರ ಕೈಗೆ 'ಶಿವಾನು
ಭವ' ಸರಿಯಾದ ಕಾಲಕ್ಕೆ ಮುಟ್ಟಿತ್ತು. ಹೀಗೆ ತಮ್ಮ ಜೀವನವನ್ನು ಸೌಗಂಧ
ದಂತೆ ಕಳೆದ ಕರ್ಮವೀರರು, ಕಾಯಕಯೋಗಿಗಳು. ಸಾರ್ಥಕ, ಸಫಲ, ಯಶಸ್ವಿ
ಜೀವನ ಸಾಗಿಸಿದ ಡಾ॥ ಫ ಗು. ಹಳಕಟ್ಟಿಯವರು ೨೯-೬-೧೯೬೪ ರಂದು ಲಿಂಗ
ದೊಳಗಾದರು. ಬಾಡಿಗೆಯ ಮನೆಯಿಂದ ಬಾಡಿಗೆಯಿಲ್ಲದ ಮಹಾಮನೆ ಸೇರಿದರು.
ಆದರೂ ಅವರ ದಿವ್ಯಾತ್ಮ ಇಂದಿಗೂ ಚಿರಂತನವಾಗಿ ಈ ನಾಡಿನಲ್ಲಿ ಬೆಳಗುತ್ತಿದೆ.

( 32 ನೇ ಪುಟ ನೋಡಿ )

ಕಾವ್ಯ  ವಾಹಿನಿ

## ಕರ್ಮವ ಮಾಡು ಸೋದರ

—ಎಸ್. ಕೃಷ್ಣಪ್ಪ

ಕರ್ಮವ ಮಾಡು ಸೋದರ ನೀನು
ಪುನಃ ಎಂದಿಗೂ ಕೊರಗದೊಲು
ಧರ್ಮರಾಜನ ಮುಂದೆ ಬಂದಾಗ
ಮುಖವನು ತೋರಿಸಿ ಸಾಗುವೊಲು
ಕರ್ಮವ ಮಾಡು ಸೋದರ.......

ಮನದೊಳು ಇತರರಿಗಾಗಿ ನೀನು ಸದಾ
ಶುಭ ಭಾವನೆಗಳ ನಡೆಸುತಿರು
ನಿನ್ನ ನಿಂದೆಯ ಮಾಡುವವರನು
ನಿನ್ನವರಾಗಿ ಮಾಡುತಿರು
ನೇತ್ರಗಳಿಂದ ಕೆಡುಕ ನೋಡದಿರು
ನೇತ್ರವ ತಗ್ಗಿಸದಿರುವವೊಲು
ಕರ್ಮವ ಮಾಡು ಸೋದರ.......

ನಾಲಿಗೆಯಿಂದ ದುಃಖವ ನೀಡುವ
ಮಾತನ್ನೆಂದಿಗೂ ಆಡದಿರೂ
ಜ್ಞಾನರತ್ನಗಳ ಭಂಡಾರವನೂ
ಬಾಯಿಯಿಂದ ನೀ ಹೊರಗೆ ಬಿಡು
ಕಿವಿಗಳಿಂದ ನೀ ಕೆಡುಕ ಕೇಳದಿರು
ಕಿವಿಗಳ ಕೊಯ್ಯದೆ ಇರುವವೊಲು
ಕರ್ಮವ ಮಾಡು ಸೋದರ........

ಕಾಲುಗಳಿಂದ ನಡೆಯುತಿದ್ದರೂ
ಕೆಟ್ಟ ಸ್ಥಳಗಳಿಗೆ ಹೋಗದಿರು
ನಿನ್ನಯ ಕರ್ಮವ ಕಥೆಯಲಿ ನೀನು
ಹೀನ ಕೃತ್ಯಗಳ ಬೆರೆಸದಿರು
ಕೈಗಳಿಂದ ಶುಭ ಕರ್ಮವ ಮಾಡು
ಕೈಗಳ ಕಡಿಯದೆ ಬಳಸುವೊಲು
ಕರ್ಮವ ಮಾಡು ಸೋದರ........

ಜೀವನ ಸುಂದರವಾಗಿರಲಿ
ನಗುನಗುತಲಿ ಮನೆ ಸೇರುವೊಲು
ಧರ್ಮರಾಜನ ಮುಂದೆ ಬಂದಾಗ
ನಿರ್ಭಯನಾಗಿ ಹೋಗುವೊಲು

ನಿನ್ನಯ ಖಾತೆ ಜಮಾ ತೋರಿಸಲಿ
ಮುಂದೆ ನೀ ಎಂದಿಗೂ ಕೊರಗದೊಲು
ಕರ್ಮವ ಮಾಡು ಸೋದರ........

( 23 ನೇ ಪುಟದಿಂದ )

ವಾಗಿರುತ್ತದೆಂದೂ, ರೇಡಿಯೋ ತರಂಗಗಳು ತಲ್ಲಣಗೊಳ್ಳುತ್ತದೆಂದೂ, ಮಾನವ ಮತ್ತು ಪ್ರಾಣಿಗಳ ಮೇಲೆ ಇದರ ಪ್ರಭಾವವಿದ್ದು ಮಾನಸಿಕ ಒತ್ತಡವಿರುತ್ತದೆಂದೂ ಈ ಪ್ರಭಾವದಿಂದ ಒಂದು ನೂತನ ಅನುಭವವನ್ನು ಮಾನವ ಪಡೆಯುತ್ತಾನೆಂದೂ ಊಹಿಸಲಾಗಿದೆ. ಮಾನವನ ಕುತೂಹಲವನ್ನು ಕೆರಳಿಸುವ ಪ್ರಕೃತಿಯ ಈ ಶತ ಮಾನದ ಒಂದು ಅತ್ಯದ್ಭುತವನ್ನು ನಾವೆಲ್ಲಾ ಕಾದು ನೋಡೋಣ.

(ಕೃಷಿ ಕಣ ದ 1980.)

(30 ನೇ ಪುಟದಿಂದ)

ಅಂತೆಯೇ ಇಂದು ನಾಡಿನಾದ್ಯಂತವಾಗಿ ಅವರ ಜನ್ಮ ಶತಮಾನೋತ್ಸವವನ್ನು ಆಚ ರಿಸುತ್ತಿದೆ. ಅವರು ಸಾಧಿಸಿದ ಕಾರ್ಯಗಳನ್ನು ನೆನೆಯುತ್ತಿದೆ. ಈಗಲಾದರೂ ವಿಜಾಪೂರದ ಒಂದು ಮಹಾವಿದ್ಯಾಲಯಕ್ಕೆ ಡಾ ಫ ಗು. ಹಳಕಟ್ಟಿಯವರ ಹೆಸ ರನ್ನು ಇಟ್ಟು ಅವರು ಸಲ್ಲಿಸಿದ ಸೇವೆಗೆ ತಮ್ಮ ಕೃತಜ್ಞತೆಯ ಕುಸುಮಾಂಜಲಿಯನ್ನು ಕನ್ನಡಿಗರು ಅರ್ಪಿಸಲು ಮುಂದಾಗುವರೇ ಎಂಬುದನ್ನು ಮಹಾಜನ ಕುತೂಹಲದಿಂದ ಕಾದು ನೋಡುತ್ತದೆ.

---

# ಪ್ರೇಮವೇ ಶಿವ

| | |
|---|---|
| ತಮಿಳು | ಅನ್ಬುಂ ಶಿವಮುಂ ಇರಂಡೆನ್ಬರ್ ಅರಿಯಾರ್<br>ಅನ್ಬೇ ಶಿವಂ ಆವದುಂ ಆರುಂ ಅರಿಗಿಲಾರ್<br>ಅನ್ಬೇ ಶಿವಮಾವದು ಆರುಂ ಅರಿಂದಪಿನ್<br>ಅನ್ಬೇ ಶಿವಮಾಯ್ ಅಮರ್ನ್ದು ಇರುಂದಾರೇ. |
| ಕನ್ನಡ | ಪ್ರೇಮವೂ ಶಿವನೂ ಬೇರೆಯೆಂಬರು ತಿಳಿಗೇಡಿಗಳು<br>ಪ್ರೇಮವೇ ಶಿವನೆಂಬುದನು ಯಾರೂ ತಿಳಿಯದಿಹರು<br>ಪ್ರೇಮವೇ ಶಿವನೆಂಬುದನು ಎಲ್ಲರೂ ತಿಳಿದ ಬಳಿಕ<br>ಪ್ರೇಮವೇ ಶಿವನಾಗಿ ನೆಲಸಿರ್ಪನಲ್ಲಾ ! |

( ತಿರುಮಂದಿರಂ ತಮಿಳು ಶೈವ ಸಿದ್ಧಾಂತ ಕೃತಿಯಿಂದ )

# "ವಿಜಯನಗರ ಸ್ಥಾಪನೆಯಲ್ಲಿ ಲಿಂಗಧರ್ಮದ ಪಾತ್ರ"

—ವೇದ ವೇದಾಂತ ವಿದ್ಯಾವಾಚಸ್ಪತಿ ಡಾ|| ಶ್ರೀ ಟಿ. ಎನ್. ಮಲ್ಲಪ್ಪ.

ಇನ್ನು ಕ್ರಿಯಾಶಕ್ತಿ ದೇಶಿಕರ ಮತ್ತು ಅವರ ಶಿಷ್ಯನಾದ ಆಂಗೀರಸ ಮಾಧವ ಮಂತ್ರಿಯು ಆರಾಧ್ಯ ಬ್ರಾಹ್ಮಣ ಸಂಪ್ರದಾಯದ ಗೋಳಕೀ ಮಠದ ಶುದ್ಧ ಶೈವ ಶ್ರೋತ್ರಿಯ ಇಷ್ಟ ಲಿಂಗಾರ್ಚಕ ವೈದಿಕ ಬ್ರಾಹ್ಮಣರೆಂಬುದನ್ನು EC VII Sk 281 ನೆಯ ಶಾಸನವು ಸ್ಪಷ್ಟಪಡಿಸುತ್ತದೆ. ಅದರಲ್ಲಿ ಈ ಮಾಧವಾಚಾರ್ಯನು "ಗೋತ್ರೇಯಾಂಗಿರಸಾಂ ಪ್ರಚಂಡ ತಪಸಶ್ಚಾಮುಂಡ ಪ್ರಸ್ತಾದುದ್ಭವಂ" ಎಂದು ಹೇಳಿ "ಶ್ರೀಮದ್ ಕಾಶೀವಿಲಾಸ ಕ್ರಿಯಾಶಕ್ತಿ ಶಿವದೇಶಿಕಾಧಿಷ್ಠೇನ ಶುದ್ಧ ಶೈವಾಮ್ನಾಯ ವರ್ತ್ಮನಾ ನಿಜೇಷ್ಟಲಿಂಗ ಕೃತಾಧಿಷ್ಠಾನಂ ದೇವ ದೇವಂ ತ್ರ್ಯಂಬಕನಾಥಂ........ಯಜನ್" ಎಂದು ಹೇಳಿರುವುದರಲ್ಲಿ ಈ ಗುರುಶಿಷ್ಯರು ಶುದ್ಧ ಶೈವ ಬ್ರಾಹ್ಮಣರು ಇಷ್ಟ ಲಿಂಗಾರ್ಚಕರು ಎಂಬುದು ಅನುಮಾನಕ್ಕೆ ಎಡೆಯಿಲ್ಲದಂತಿದೆ. ಈ ಮಾಧವಾಚಾರ್ಯನು ಶೈವಶಾಂಕರ ಸಿದ್ಧಾಂತವನ್ನು ಹೇಳುವ ಸೂತ ಸಂಹಿತೆಗೆ ವ್ಯಾಖ್ಯಾನವನ್ನು ಬರೆದಿದ್ದಾನೆ. ಅದರ ಆರಂಭದಲ್ಲಿಯೇ ಸೋಮ ಶಂಭುವಿನ ಆಧಾರವನ್ನು ತೆಗೆದುಕೊಂಡಿರುವುದರಿಂದ ಇವರದು ಗೋಲಕೀ ಮಠದ ಸಂಪ್ರದಾಯವೆಂಬುದು ಸ್ಪಷ್ಟವಾಗುತ್ತದೆ. ಈ ಸೂತ ಸಂಹಿತೆಯಲ್ಲಿ ಕಾಳಾಮುಖರನ್ನು ನಿಂದಿಸಿರುವುದರಿಂದ ಕ್ರಿಯಾಶಕ್ತಿದೇಶಿಕರು ಕಾಳಾಮುಖರಲ್ಲವೆಂಬ ಕಪಟರಾಳ ಕೃಷ್ಣರಾಯರ ಅಭಿಪ್ರಾಯವೂ ಸರಿಯಾದುದೆಂಬುದರಲ್ಲಿ ಸಂದೇಹಕ್ಕೆ ಕಾರಣವಿಲ್ಲ. ಕ್ರಿಯಾಶಕ್ತಿ ದೇಶಿಕ ಗುರುವಿನ ಅಧಿಷ್ಠಾನದಲ್ಲಿ ಶುದ್ಧಶೈವಾಮ್ನಾಯ ವರ್ತ್ಮನಾ ಎಂದರೆ ಶುದ್ಧ ಶೈವ ವೈಧಿಕ ಸಂಪ್ರದಾಯಾನುಸಾರವಾಗಿ ಆಂಗೀರಸ ಗೋತ್ರದ ಮಾಧವಾಚಾರ್ಯನು ತನ್ನ ಇಷ್ಟಲಿಂಗದಲ್ಲಿ ಅಧಿಷ್ಠಿತ ಶಿವನನ್ನು, ಲಿಂಗಯಜ್ಞೋಪವೀತಧಾರಿ ಪದ್ಮರಸನು ಅವನ ಇಷ್ಟಲಿಂಗದಲ್ಲಿ ಅಧಿಷ್ಠಿತನಾದ ಶಿವನನ್ನು ಪೂಜಿಸುತ್ತಿದ್ದಂತೆ ಪೂಜಿಸುತ್ತಿದ್ದನು. ಕಪಟರಾಳ ಕೃಷ್ಣರಾಯರು ಗೋಳಕೀ ಮಠವನ್ನು "ಶುದ್ಧ ಶೈವ ಸಂಪ್ರದಾಯದ ಬ್ರಾಹ್ಮಣ ಮಠವಿದು" ಎಂದಿರುವರು. ಆದುದರಿಂದ ಆಂಗೀರಸ ಗೋತ್ರದ ಮಾಧವಾಚಾರ್ಯನು, ಗೋಳಕೀ ಮಠದ ಸೋಮ ಶಂಭುವಿನ ಆಧಾರವನ್ನು ಸೂತ ಸಂಹಿತೆಯ ತಾತ್ಪರ್ಯ ದೀಪಿಕೆಯಲ್ಲಿ ತೆಗೆದುಕೊಂಡಿರುವುದರಲ್ಲಿ ಆಶ್ಚರ್ಯವಿಲ್ಲ. ಕಂಚಿಯ ದೇವಸ್ಥಾನ ಮಠಗಳನ್ನು ಕಟ್ಟಿದವರು ತಲೆಯಲ್ಲಿ ಲಿಂಗವನ್ನು ಧರಿಸಿದ

ಪಲ್ಲವ ರಾಜರು ಎಂದ ಮೇಲೆ ಅವರ ಗುರುಗಳಾದ ಮಾಹೇಶ್ವರರು ಲಿಂಗಧರಿಸಿದ ವರೇ. ಹತ್ತನೆಯ ಹರಿಭದ್ರಸೂರಿಯು ಹಿಂದೆ ಹೇಳಿದಂತೆ "ಜಟಾದಾಪ್ರಾಣಲಿಂಗ ಧರಾಃ" ಎಂದು ಹೇಳಿರುವುದೇ ಮೊದಲಾದ ಆಧಾರಗಳೂ ಇವೆ. ಈ ಮಾಹೇಶ್ವರ ಸಿದ್ಧಾಂತವನ್ನು ಶ್ರೀಕಂಠನಾಥ ಗುರುವು ಸಂಗಮರಾಜನಿಗೂ ವೇದ ಭಾಷ್ಯಕಾರ ಸಾಯಣನಿಗೂ ಅವನ ಸಹೋದರರಾದ ಮಾಧವ ಭೋಗನಾಥರಿಗೂ ಬೋಧಿಸುತ್ತಿದ್ದನು. ವಿದ್ಯಾತೀರ್ಥ ಮಹೇಶ್ವರನು ಆತನ ಹೆಸರಿನಲ್ಲಿ ಮಹೇಶ್ವರ ಪದವಿರುವುದರಿಂದ ಮಾಹೇಶ್ವರ ಸಂಪ್ರದಾಯದವನೆ. ಕ್ರಿಯಾಶಕ್ತಿಯೂ ಅವನ ಶಿಷ್ಯ ಮಾಧವಾಚಾರ್ಯನೂ ಇಷ್ಟ ಲಿಂಗಾರ್ಚಕ ಶುದ್ಧ ಶೈವ ಮಾಹೇಶ್ವರರು. ವಿದ್ಯಾರಣ್ಯ ಹೆಸರನ್ನು ಪಡೆದು ಶೃಂಗೇರಿ ಪೀಠವನ್ನು ಮೇಲಿನವರಲ್ಲೊಬ್ಬನು ಅಲಂಕರಿಸಿದುದರಿಂದ ವಿಜಯನಗರ ಸ್ಥಾಪಕರಿವರೆಲ್ಲರೂ ಇಷ್ಟಲಿಂಗಾರ್ಚಕ ಶುದ್ಧ ಶೈವ ವೈದಿಕ ಬ್ರಾಹ್ಮಣರೆಂದಾಯಿತು.

ಮೇಲೆ ಹೇಳಿದುದೆಲ್ಲವೂ ಅವಶ್ಯವನ್ನಾಗಿಸುವಂತಹ ಶ್ರೇಷ್ಠ ಆಧಾರ ಗ್ರಂಥವೊಂದನ್ನು ಬೆಳಕಿಗೆ ತಂದಿದ್ದಾರೆ ಕಪಟರಾಳ ಕಷ್ಣರಾಯರು. ಅದು "ಪುರುಷಾರ್ಥ ಪ್ರಬೋಧ"ಗ್ರಂಥ. ಅವರ ಮಾತಿನಲ್ಲಿಯೇ ಹೀಗೆ ಹೇಳಬಹುದು—" ಒಟ್ಟನ ಮೇಲೆ ಶೈವಶಾಸ್ತ್ರವನ್ನು ತಿಳಿಯಲಿಚ್ಛಿಸುವವರಿಗೆ ಈ ಗ್ರಂಥವು ಅತ್ಯುತ್ತಮವಾಗಿದೆ. ಆದರಲ್ಲೂ ವೈದಿಕ ಶೈವವನ್ನು ಕುರಿತಿದ್ದಾದ ಸೂತ ಸಂಹಿತೆಯೊಂದೇ ಪ್ರಾಚೀನ ಗ್ರಂಥ. ಈ 'ಪುರುಷಾರ್ಥ ಪ್ರಬೋಧ'ವು ಅದರಂತೆ ಉಪಯುಕ್ತವಾದ ಇನ್ನೊಂದು ಗ್ರಂಥವಾಗಿದೆ. ಇಂಥ ಗ್ರಂಥಗಳು ಬೆಳಕಿಗೆ ಬಂದ ದಿನವೇ ಸುದಿನ!. ಕಪಟರಾಳರ ಕರ್ನಾಟಕ ಸಂಸ್ಕೃತಿಯ ಇತಿಹಾಸ ಗ್ರಂಥದ ೨೬೨ನೆಯ ಪುಟದಿಂದ ೨೭೦ರ ವರೆಗೆ ಈ ಗ್ರಂಥದ ವಿಷಯವನ್ನು ಪ್ರಕಾಶಗೊಳಿಸಿ ಮೇಲಿನ ಪ್ರಶಸ್ತಿ ವಾಕ್ಯದಿಂದ ಆ ಗ್ರಂಥ ವಿಷಯವನ್ನು ಮುಗಿಸಿದ್ದಾರೆ. ಈ ಗ್ರಂಥದಲ್ಲಿ ಗಮನಿಸಬೇಕಾದ ಮುಖ್ಯ ವಿಷಯಗಳಾವುವೆಂದರೆ 1) ಈ ಗ್ರಂಥಕಾರರು ಶೃಂಗೇರಿ ಮಠದ ಸಂಪ್ರದಾಯದ ಬ್ರಾಹ್ಮಣರು. 2) ಇವರು ವಿದ್ಯಾರಣ್ಯರ ಸಮಕಾಲೀನರು. 3) ಈ ಗ್ರಂಥವು ಹೇಳುವುದು ಶುದ್ಧ ಶೈವ ಸಂಪ್ರದಾಯದ ಶಾಂಕರ ಸಿದ್ಧಾಂತ. 4) ಶೃಂಗೇರಿ ಮಠದ ಪದ್ಧತಿಯಂತೆ ಶಿವಲಿಂಗ ಪೂಜೆಯೊಡನೆ ವಿಷ್ಣುವಿನ ಪೂಜೆಗೆ ಅವಕಾಶ ಕೊಟ್ಟಿದೆ. 5) ಈ ಗ್ರಂಥದ ವೈಶಿಷ್ಟ್ಯವು ಇಷ್ಟ ಲಿಂಗಾರ್ಚಕ ಜಂಗಮ ಸಂಪ್ರದಾಯವು. ಈ ಶುದ್ಧ ಶೈವ ವೈದಿಕ ಬ್ರಾಹ್ಮಣರಲ್ಲಿದ್ದುದನ್ನು ಹೇಳುವುದು.

ಶ್ರೀ ಕಪಟರಾಳ ಕೃಷ್ಣರಾಯರು ಮೊದಲು ಈ "ಪುರುಷಾರ್ಥ ಪ್ರಬೋಧ" ಗ್ರಂಥವನ್ನು ಬರೆದ ಬ್ರಹ್ಮಾನಂದ ಭಾರತಿಗಳು ಶೃಂಗೇರಿ ಮಠದ ಸಂಪ್ರದಾಯದವರೆಂಬುದನ್ನೂ ವಿದ್ಯಾರಣ್ಯರ ಸಮಕಾಲದವರೆನ್ನುವುದನ್ನೂ ಸ್ಪಷ್ಟಮಾಡುತ್ತಾರೆ. "ವಾದೀಂದ್ರ ಬಿರುದುಳ್ಳವನೂ, ವಿದ್ಯಾಸಾಗರನೂ ಭೂರಿವಾಳ ಪರಿಷತ್ ಭೂಷಣ

ಂದ ರಾಮರಾಜ ಸರಸ್ವತಿ, ಆನಂದ ಸರಸ್ವತಿ, ರಾಮಾನಂದ ಸರಸ್ವತಿ, ರಾಮಾ
ಂದ ಭಾರತೀ ಮುಂತಾಗಿ ಹೆಸರುಳ್ಳವನೂ ಆದಾತನು ಈ ಬ್ರಹ್ಮಾನಂದ ಭಾರತಿಯು
ರುವು ಎಂಬುದು ಸ್ಪಷ್ಟವಾಗುತ್ತದೆ. ಶ್ರೀ ಶಂಕರಾಚಾರ್ಯರ ಮಠಗಳ ಆಮ್ನಾ
ು ಸ್ತೋತ್ರದಿಂದ. ಶೃಂಗೇರಿ ಮಠವು ದಕ್ಷಿಣ ಆಮ್ನಾಯಕ್ಕೆ ಸೇರಿದ್ದುದಾಗಿದೆ.

ಸಂಪ್ರದಾಯವು ಭೂರಿವಾಳ ಪರಿಷತ್ತು ಆದುದರಿಂದ ರಾಮರಾಜ ಸರಸ್ವತಿ
ಥವಾ ರಾಮಾನಂದಭಾರತಿ ಮತ್ತು ಬ್ರಹ್ಮಾನಂದಭಾರತಿ ಈ ಗುರು ಶಿಷ್ಯರಿಬ್ಬರೂ
ಂಗೇರಿ ಪೀಠದ ಸಂಪ್ರದಾಯಕ್ಕೆ ಒಳಪಟ್ಟವರೆಂಬುದು ಅವರ ವರ್ಣನೆಯಿಂದ
ಷ್ಪನ್ನವಾಗುತ್ತದೆ... ರಾಮಾನಂದಸರಸ್ವತಿಯ ಕಾಲವನ್ನು ಸ್ಥೂಲವಾಗಿ ಕಂಡು
ೊಳ್ಳಬಹುದು ಕಡೂರ್ ಜಿಲ್ಲೆಯ ಕೊಪ್ಪ ತಾಲ್ಲೂಕು ೩೪ನೆ ನಂಬರಿನ ಶಾಸ
ದಲ್ಲಿ ಈ "ವಿದ್ಯಾಸಾಗರ" ಎಂಬ ಶಬ್ದದ ಪ್ರಯೋಗವಿದೆ........ಶಾಸನದ ಸಂಪಾ
ಕರು The cultivater through vidyasagara of Sringeri
Harihara Raya....ಎಂದು ಕೊಟ್ಟಿರುವರು. ಈ ಶಾಸನದ ಕಾಲವು ಕ್ರಿ.ಶ.
೩೩೬. ಈ ವಿದ್ಯಾಸಾಗರ ಎಂಬ ಬಿರುದುಳ್ಳ ರಾಮಾನಂದಸರಸ್ವತಿಯು ಎರಡ
ಯ ಹರಿಹರ ಮಹಾರಾಯನ ಕಾಲದವರೆಂದು ಅನುಮಾನಿಸಲು ಇನ್ನೂ ಕೆಲವು
ಾರಣಗಳಿವೆ. ಇದೇ 'ಪುರುಷಾರ್ಥ ಪ್ರಬೋಧ'ದಲ್ಲಿ ......ಶಂಕರ ಭಗವತ್ಪಾದರು
ರೀ ವಿದ್ಯಾತೀರ್ಥರು, ಶ್ರೀ ವಿದ್ಯಾರಣ್ಯ ಶ್ರೀ ಭಾರತೀ ತೀರ್ಥರ ನಂತರ ಆಗಿ ಹೋದ
ೃಂಗೇರಿ ಪೀಠದ ಮತ್ತಾವ ಸ್ವಾಮಿಗಳನ್ನೂ ಹೇಳಿಲ್ಲ. ಆದುದರಿಂದ ಬ್ರಹ್ಮಾನಂದ
ಾರತಿ, ಶ್ರೀ ವಿದ್ಯಾರಣ್ಯ ಶ್ರೀ ಭಾರತೀ ತೀರ್ಥರ ಸಮಕಾಲದವನು

ಹೀಗೆ ಶೃಂಗೇರಿ ಮಠದ ಸಂಪ್ರದಾಯದ, ವಿದ್ಯಾರಣ್ಯರ ಸಮಕಾಲೀನರಾದ
ಬ್ರಹ್ಮಾನಂದಭಾರತಿಯವರು, ಅವರು ಬರೆದ ಈ ಪುರುಷಾರ್ಥ ಪ್ರಬೋಧ ಗ್ರಂಥದಲ್ಲಿ
ಕಪಟರಾಳನು ಹೇಳುವಂತೆ ಶ್ರೀ ಶಂಕರಾಚಾರ್ಯರನ್ನು ತಮ್ಮ ಸಮಕಾಲೀನರಾದ
ವಿದ್ಯಾರಣ್ಯ ವಿದ್ಯಾತೀರ್ಥ ಭಾರತೀ ತೀರ್ಥರನ್ನು ಸ್ಮರಿಸಿರುತ್ತಾರೆ. ವಿದ್ಯಾರಣ್ಯರು
ಎರಡು ಸಾರಿಯೂ ಭಾರತೀ ತೀರ್ಥರು ಏಳು ಸಾರಿಯೂ ಈ ಗ್ರಂಥದಲ್ಲಿ ಉಲ್ಲೇಕಿ
ಸಲ್ಪಟ್ಟಿದ್ದಾರೆ. ಇವರು ಬರೆದಿರುವ ಗ್ರಂಥಗಳು ಬೇರೆ ಬೇರೆಯಾಗಿ ಉಕ್ತವಾಗಿವೆ.
ಭಾರತೀ ತೀರ್ಥ ರಚಿತವಾದ ಶ್ವೇತಾಶ್ವತರ ಮತ್ತು ಕೇನ ಉಪನಿಷತ್ತುಗಳ ವಾರ್ತಿ
ಕಗಳೇ ಮೊದಲಾದ ಏಳೆಂಟು ಗ್ರಂಥಗಳು ಹೇಳಲ್ಪಟ್ಟಿವೆ. ಬ್ರಹ್ಮಾಂಶರಾದ ವಿಶ್ವ
ರೂಪಾಚಾರ್ಯರಿಂದ ನೈಷ್ಕರ್ಮ್ಯಸಿದ್ಧಿಯೆಂಬ ಗ್ರಂಥವು ರಚಿಸಲಾಗಿದೆಯೆಂದು ನುಡಿ
ಯುತ್ತಾನೆ.

ಇಷ್ಟೆಲ್ಲಾ ಶೃಂಗೇರಿ ಮಠಕ್ಕೆ ಗುರುಗಳ ಹಾಗು ಅವರ ಗ್ರಂಥಗಳ ವಿವರವೇ
ಮೊದಲಾದುದನ್ನು ಹೇಳುವ ಗ್ರಂಥದಲ್ಲಿ ಶೃಂಗೇರಿ ಮಠವ ಸ್ವ ಸಂಪ್ರದಾಯವನ್ನು
ಗ್ರಂಥಕರ್ತನು ಹೇಳುತ್ತಿಲ್ಲವೆಂದರೆ ಈ ವಿವರವೆಲ್ಲವೂ ಅಪ್ರಸಂಗವಾಗುತ್ತಿದ್ದಿತು.

ಈ ಗ್ರಂಥದಲ್ಲಿ ಪ್ರಾರಂಭದಲ್ಲಿಯೇ ವೇದೋತ್ಕರ್ಷ, ಪರಮಾದ್ವೈತ ಶಿವೋತ್ಕರ್ಷ ಉಕ್ತವಾಗಿದೆ. ಅಲ್ಲದೆ "ವಾಕ್ಯಾರ್ಥ ಜ್ಞಾನತೋ ಮುಕ್ತಿರಿತಿ ವೇದಾಂತ ಡಿಂಡಿಭಿಃ" ಎಂದು ಹೇಳಿ ಶಾಂಕರ ಸಿದ್ಧಾಂತಕ್ಕೆ ವೈಶಿಷ್ಟ್ಯವಾದ ತತ್ವಮಸಿ ವಾಕ್ಯಜ್ಞಾನದಿಂದಲೇ ಮುಕ್ತಿ ಎಂಬುದನ್ನು ಗ್ರಂಥಕರ್ತನು ಉದ್‌ಘೋಷಿಸಿದ್ದಾನೆ ವಿಷ್ಣ್ವಾರಾಧನೆಯನ್ನು ಈ ಗ್ರಂಥದಲ್ಲಿ ಹೇಳಿರುವುದು ಶೃಂಗೇರಿ ಮಠದ ಸಂಪ್ರದಾಯಕ್ಕೆ ಅನುಸಾರವಾದ ದಾಗಿದೆ. ಶೃಂಗೇರಿ ಮಠದ ಸಂಪ್ರದಾಯವನ್ನು ಹೇಳುವ ಗ್ರಂಥವಿದೆಯೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಇನ್ನು ಈ ಸಂಪ್ರದಾಯದಲ್ಲಿ ಇಷ್ಟ ಪ್ರಾಣಾರ್ಚನೆ ಜಂಗಮ ಸಂಪ್ರದಾಯವಿದ್ದುದನ್ನು ಕಪಟರಾಳ ಕೃಷ್ಣರಾಯರು ಮೂಲಾಧಾರ ಗೊಡನೆ ಇಲ್ಲಿ ಕೊಡಲಾಗಿದೆ.

ಇನ್ನೊಂದು ಮಹತ್ವದ ವಿಷಯವೇನೆಂದರೆ ಈಗ ವೀರಶೈವರಲ್ಲಿ ಪರಿಭಾಷೆ ಯಾಗಿರುವ ಇಷ್ಟಲಿಂಗ, ಪ್ರಾಣಲಿಂಗ, ಮುಂತಾದುವುಗಳ ಬಗ್ಗೆ ವಿವರಿಸಲಾಗಿದೆ. ಇದರಿಂದ "ಜಂಗಮ ಪ್ರಾಣಲಿಂಗ ಇಷ್ಟಲಿಂಗ" ಮುಂತಾದ ಸಾಂಕೇತಿಕ ಶಬ್ದಗಳು ವೈದಿಕ ಶೈವ ಪ್ರಕ್ರಿಯೆಯಲ್ಲಿ ಬಳಕೆಯಲ್ಲಿದ್ದವೆಂದು ಧಾರಾಳವಾಗಿ ಹೇಳಬಹುದು. ಇಷ್ಟಲಿಂಗಾರ್ಚನ ವಿಧಿಯನ್ನು ಹೇಳುವ ಶ್ಲೋಕಗಳನ್ನು ಕೆಳಗೆ ಕೊಟ್ಟಿದೆ.

ನಿತ್ಯಾರ್ಚನ ವಿಧಿಂ ವಕ್ಷ್ಯೇ ಶಿವಸ್ಯ ಪರಮಾತ್ಮನಃ ।
ವೈಧಿಕ ನಿರತಾಚಾರ್ಯಾತ್ "ಪ್ರಸಾದಂ" ಪ್ರಾಪ್ಯ ಆದರಾತ್ ॥
ಇಷ್ಟಲಿಂಗಾರ್ಚನಾರಂಭೇ ಜಪ್ತ್ವೇದಂ ಶ್ಲೋಕ ಪಂಚಕಃ ।
ಶನೈರ್ಭಕ್ತ್ಯೈವ ಹಸ್ತಾಭ್ಯಾಂ ಮುಖವಸ್ತ್ರಂ ನಿವಾರಯೇತ್ ॥
ವೇದಾಂತ ವಿದ್ಯಾಖಿಲ ವಿಶ್ವಮೂರ್ತೇ ವಿಭೋ ವಿರೂಪಾಕ್ಷಮಾನ್ಯ ।

ವಿಶ್ವೇಶ್ವರ ಅಶೇಷ ಮೂಲಕವಾಟ ಮುದ್ಘಾಟಯ ಕಾಲ ಕಾಲ........"ಜಂಗ ಮ ಲಿಂಗೈಕ್ಯ" ಶಿವಲಿಂಗಾರ್ಚನ ಗುಹ" ಪಾಶುಪತ ವ್ರತವನ್ನು ಕುರಿತು.

ವ್ರತಂ ಪಾಶುಪತಂ ಲೋಕೇ ಪ್ರಸಿದ್ಧಂ ಯತ್ ತದುಚ್ಯತೆ ।
ಅಶ್ರುತಮಿತಿ ವಿದ್ವದ್ಭಿಃ ವೇದ ತಂತ್ರಾರ್ಥ ಕೋವಿದೈ: ॥
ವಾಯವೀಯ ಪುರಾಣೋಕ್ತಂ ವ್ರತಂ ತಾಂತ್ರಿಕ ವೈದಿಕಂ ।
ವ್ರತಂ ಕೂರ್ಮ ಪುರಾಣೋಕ್ತಂ "ಶುದ್ಧ ವೈದಿಕ ಮುಚ್ಯತೇ" ॥
ಸೋತ್ಯಾಶ್ರಮೀಣ ವಿಜ್ಞೇಯೋ ಮಹಾ ಪಾಶುಪತಾಸ್ತಥಾ ।
ತಾಂತ್ರಿಕಾಂಸ್ತು ಸಮುದ್ದಿಶ್ಯ ಪುರಾಣೇ ಶೈವ ಸಂಜ್ಞಕೇ ॥

ಪಾಶುಪತದ ಪ್ರಾರಂಭದಲ್ಲಿಯೇ "ಲಿಂಗಧಾರಿ" ಎಂಬ ಸೂತ್ರವಿದೆ. ಅದರ ಕೌಂಡಿನ್ಯ ಭಾಷ್ಯದಲ್ಲಿ "ದಂಡಧಾರಿವತ್" ಎಂಬ ವಿವರಣೆಯಿದೆ. ದಂಡವನ್ನು ಧರಿಸಿದವನನ್ನು ದಂಡಧಾರಿ ಎನ್ನುವಂತೆ ಲಿಂಗವನ್ನು ಧರಿಸಿದವನು ಲಿಂಗಧಾರಿ ಎಂದರ್ಥ.

(42 ನೇ ಪುಟ ನೋಡಿ)

# ಸಾವಿನ ದವಡೆಯಿಂದ ಪಾರಾದವರು

—ಕ್ಯಾಪ್ಟನ್ ಎಂ. ಜಿ. ಕೆ. ಮೆಂಡನ್

ಚಂಡೀಗಡದಲ್ಲಿ ಪಂಜಾಬ್ ವಿಶ್ವವಿದ್ಯಾನಿಲಯದ ತತ್ತ್ವಶಾಸ್ತ್ರ ಪ್ರಾಧ್ಯಾಪಕಿಯಾಗಿರುವ ಡಾ॥ ರುತ್ ರೆನಾ ಎಂಬ ಮಹಿಳೆ ಒಮ್ಮೆ ಪೂನಾದ ಹೋಟೆಲ್ ಒಂದರಲ್ಲಿದ್ದರು. ಬಹು ಶೆಖೆಯಾಗಿದ್ದ ಒಂದು ಮಧ್ಯಾಹ್ನ ಅವರು ಊಟ ಮುಗಿಸಿ ಹೋಟೆಲಿನ ಜಗಲಿಯಲ್ಲಿ ಬಹು ತಗ್ಗಾದ ಆರಾಮಕುರ್ಚಿಯಲ್ಲಿ ಕುಳಿತು ತಮ್ಮ ಚಿಕ್ಕ ಬೆಕ್ಕಿನಮರಿಯ ಕುಣಿದಾಟವನ್ನು ನೋಡುತ್ತಿದ್ದರು. ಜಗಲಿಯ ಅಂಚಿನಲ್ಲಿ ಎದೆಯತ್ತರದ ದಿಡ್ಡಿಗೋಡೆಯಿತ್ತು. ಕೆಳಗೆ ಕಾಂಪೌಂಡಿನಲ್ಲಿ ಬೆಳೆದಿದ್ದ ಮರಗಳ ತುದಿಗಳಷ್ಟೆ ಅವರಿಗೆ ಕಾಣಿಸುತ್ತಿದ್ದವು. ಆ ಗೋಡೆಯು ಕೆಳಗಿನ ಆವರಣವನ್ನೂ, ಅದರಾಚೆಯಿದ್ದ ರಸ್ತೆಯನ್ನೂ ಮರೆಮಾಡಿತ್ತು. ಸುತ್ತಲೂ ನಿಶ್ಶಬ್ದ, ರಸ್ತೆಯಲ್ಲಿ ಓಡಾಟವೂ ನಿಂತಿತ್ತು. ಅವರ ಅಭ್ಯಾಸದ ಕೋಣೆಯಲ್ಲಿ ನೆಲದ ಮೇಲಿಟ್ಟಿದ್ದ ಕಾಗದಗಳ ರಾಶಿಯಲ್ಲಿ ಯಾವುದೋ ಪ್ರಾಣಿ ಹರಿದಾಡುವ ಸದ್ದು ಕೇಳಿಸಿತು. ಇಲಿಯೋ, ಹೆಗ್ಗಣವೋ ಇರಬೇಕೆಂದು ಅದನ್ನು ಓಡಿಸಲು ಒಳಗೆ ಹೋಗಬೇಕೆಂದಿದ್ದರು.

ಸದ್ದು ಮಾಡಿದ ಪ್ರಾಣಿ ಕೊಠಡಿಯ ಬಾಗಿಲಿನ ಹೊರಗೆ ಹರಿದು ಬಂತು. ಅದು ನಾಗರಹಾವು. ಅದು ಅವರತ್ತ ಮೆಲ್ಲ ಮೆಲ್ಲಗೆ ಹರಿದು ಬರುವುದನ್ನು ಕಂಡು ದಿಗ್ಭ್ರಮೆಗೊಂಡು ನಡುಗತೊಡಗಿದರು. ಬೆಕ್ಕು ಹಾವನ್ನು ನೋಡಿ ಜಗಲಿಯ ಆಚೆ ತುದಿಯಲ್ಲಿದ್ದ ಮಲಗುವ ಕೋಣೆಯೊಳಗೆ ಓಡಿ ಹೋಗಿ ಬಟ್ಟೆಗಳ ರಾಶಿಯಲ್ಲಿ ಅಡಗಿಕೊಂಡಿತು. ಹಾವು ಬೆದರಿ ಹೆಡೆ ಬಿಚ್ಚಿಕೊಂಡು ದಾಳಿಮಾಡಲು ಸಿದ್ಧವಾಯಿತು. ರೇನಾ ಕಂಗಾಲಾಗಿ ಅತ್ಯಂತ ಭೀತಿಯಿಂದ ನಿಶ್ಚಲವಾಗಿ ಕುರ್ಚಿಗೆ ಅಂಟಿಕೊಂಡಂತೆ ಎವೆಯಿಕ್ಕದೆ ಕಲ್ಲಾಗಿ ಕುಳಿತರು. ಮೈಯ ರೋಮಗಳು ಎದ್ದುನಿಂತವು. ಎದೆ ಹೊಡಕೊಳ್ಳತೊಡಗಿತು. ಉಸಿರಾಟ ನಿಂತಿತು. ಹಾವು ಕುರ್ಚಿಯ ಮತ್ತು ಬಾಗಿಲಿನ ಮಧ್ಯದಲ್ಲಿದ್ದುದರಿಂದ ಅವರು ಓಡಿಹೋಗಲಾಗಲಿಲ್ಲ. ಹಾವಿನ ಮೇಲೆ ದೃಷ್ಟಿ ನೆಟ್ಟು ಸ್ತಬ್ಧರಾಗಿದ್ದರು.

ಹಾವು ಹೆಡೆಯನ್ನು ಮಡಿಚಿ ತನ್ನ ತಲೆಯನ್ನು ನೆಲದಿಂದ ಕೆಲವು ಅಂಗುಲಗಳ ಎತ್ತರದಲ್ಲಿಟ್ಟುಕೊಂಡು ಅವರತ್ತ ನಿಧಾನವಾಗಿ ಹರಿಯತೊಡಗಿತು. ಸೀರೆಯ ನೆರಿಗೆಗಳನ್ನು ಹಾರಾಡುವಷ್ಟು ಜೋರಾಗಿ ಗಾಳಿ ಬೀಸುತ್ತಿದ್ದರೆ ಹಾವು ಉದ್ರೇಕ

ಗೊಂಡು ಅಪಾಯ ಮಾಡಬಹುದಾಗಿತ್ತು. ಸುದೈವದಿಂದ ಗಾಳಿ ಮಂದವಾಗಿತ್ತು. ಕುರ್ಚಿಯಿಂದ ಎದ್ದು ನೆಟ್ಟಗೆ ಕುಳಿತರೆ ಸೀರೆಯ ಅಲುಗಾಟದಿಂದ ಹಾವು ಉದ್ದಿ ಪನದಿಂದ ಅವರನ್ನು ಕಚ್ಚುವ ಗಂಡಾಂತರವಿತ್ತು. ಆದ್ದರಿಂದ ಅಲುಗಾಡದೆಯೇ ಕೂತಿರಬೇಕಾಗಿತ್ತು. ಹಾವು ಹರಿಯುತ್ತಲೇ ಅವರ ಕಾಲುಗಳ ಹತ್ತಿರ ಹೋಯಿತು. ಅವರ ಪ್ರತಿಯೊಂದು ಅವಯುವವೂ ಸೆಟೆಯಿತು. ರೆಪ್ಪೆಯನ್ನು ಅಲುಗಾಡಿಸಲೂ ಧೈರ್ಯವಿಲ್ಲದೆ ಹಾವನ್ನು ಶೂನ್ಯದೃಷ್ಟಿಯಿಂದ ನೋಡುತ್ತಾ, ಸಹಾಯಕ್ಕೆ ಕೂಗಿ ಕೊಂಡರೆ ಅಪಾಯವೆಂದು ಸ್ತಂಭೀಭೂತರಾದರು. ಸೀರೆಯ ನೆರಿಗೆಗಳು ಕುರ್ಚಿಯ ಕೆಳಗೆ ಜೋತುಬಿದ್ದಿದ್ದವು. ನೆಲ ಕಾದಿದ್ದರಿಂದ ಹಾವು ಅವರ ಕಾಲನ್ನೇರಿತು. ಅವರು ಕಾಲುಗಳನ್ನು ಸೇರಿಸಿ ಸೆಟೆಸಿದ್ದರು. ಹಾವು ಕಾಲನೇರಿ ಅವರ ತೊಡೆಯ ಮೇಲೆ ಕುಂಡಲಿ ಹಾಕಿ ಮಲಗಿತು. ಅವರ ಕತ್ತು; ಬೆನ್ನುಗಳ ಮೇಲೆ ಬೆವರು ಸುರಿಯುತ್ತಿತ್ತು ಕಲ್ಲಾಗಿದ್ದರು. ಅವರ ಬ್ಲೌಸ್ ಬೆವರಿನಿಂದ ಪೂರ್ತಿ ನೆನೆದಿತ್ತು.

ಮಧ್ಯಾಹ್ನವೇರಿದಂತೆ ಬಿಸಿಲು ಜಗಲಿ ಮತ್ತು ಕುರ್ಚಿಯಮೇಲೆ ಬೀಳತೊಡ ಗಿತು. ಬಿಸಿಲಿನ ಜಳ ಮತ್ತು ಅವರ ಮೈಕಾಲು ಹಾವಿಗೆ ಅಹಿತವಾಗಿ ಅದು ತೊಡೆಯಿಂದ ಕೆಳಗಿಳಿದು ಅಭ್ಯಾಸದ ಕೊಠಡಿಯೊಳಕ್ಕೆ ಹೋಯಿತು. ಅವರು ಕುರ್ಚಿ ಯಿಂದಿಳಿದು ಸದ್ದಾಗದಂತೆ ಬಾಗಿಲನ್ನು ಮುಚ್ಚಿದರು. ನಂತರ ಹೊರಗಡೆಯಿಂದ ಸಹಾಯಕ್ಕೆ ಕೂಗಿಕೊಂಡು ಪೋಲೀಸರಿಗೆ ಹೇಳಿಕಳುಹಿಸಿದರು. ಹಾವಾಡಿಗನನ್ನು ಕರೆಸಿ ಅವನ ಪುಂಗಿಯಿಂದ ಹಾವನ್ನು ಹಿಡಿಸಲಾಯಿತು. ಬೆಕ್ಕಿನಮರಿ ಕಪಾಟಿನ ಮೇಲೆ ಸುರಕ್ಷಿತವಾಗಿ ಕುಳಿತಿತ್ತು.

## ನಯಾಗರದಲ್ಲಾದ ಆಘಾತ

ಪ್ರಚಂಡ ನಯಾಗರಾ ಜಲಪಾತವು ನೀರಿನ ಪ್ರಮಾಣದಲ್ಲಿ ಜಗತ್ತಿನ ಅತ್ಯಂತ ಭಾರಿ ಜಲಪಾತಗಳಲ್ಲಿ ಮೂರನೆಯ ಸ್ಥಾನದಲ್ಲಿದೆ. ವೆನಿಜೂಲ ಪ್ರಾಂತದಲ್ಲಿರುವ "ಏಂಜಲ್ ಫಾಲ್ಸ್" ಪೃಥ್ವಿಯ ಜಲಪಾತಗಳಲ್ಲಿ ಅತ್ಯುನ್ನತವಾದುದು — 3215 ಅಡಿ ಎತ್ತರ, ವಿಶ್ವದ ದ್ವಿತೀಯ ಅತ್ಯುನ್ನತ ಜಲಪಾತವು ದಕ್ಷಿಣ ಆಫ್ರಿಕದ ತುಗೇಲಾ ಜಲಪಾತ. ಈ ದೈತ್ಯ ಜಲಪಾತಗಳಲ್ಲಿ ಬೀಳುವ ನೀರಿಗಿಂತಲೂ ಅತ್ಯ ಧಿಕ ಪ್ರಮಾಣದಲ್ಲಿ ನೀರು ನಯಾಗರ ಜಲಪಾತದಿಂದ ಧುಮುಕುತ್ತದೆ. ಇದರ ಕೆಳಗೆ ಪ್ರಪಾತಕ್ಕೆ ಧುಮುಕುವ ಬೃಹದಾಕಾರದ ರಾಶಿ ರಾಶಿ ನೀರು ಗುಡುಗಿನಿಂತಲೂ ಜೋರಾಗಿ ಆರ್ಭಟಿಸುತ್ತದೆ. ಒಂದು ನಿಮಿಷದಲ್ಲಿ 12,600,000 ಘನ ಅಡಿಗಳಷ್ಟು ನೀರು ಹರಿಯುತ್ತದೆ. ಎಂದರೆ ಒಂದು ವಾರದಲ್ಲಿ ಒಂದು ಘನ ಮೈಲಿ ನೀರು. ಮೂರು ಮೈಲಿ ಅಗಲದ ನದಿಯು ಜಲಪಾತದ ಬಳಿ ಒಂದು ಮೈಲಿ ಅಗಲವಾ ಗುತ್ತದೆ. ಈ ಜಲಪಾತದ ಎರಡು ಭಾಗಗಳಲ್ಲಿ ಕೆನಡಾ ಭಾಗದ ಜಲರಾಶಿಯೊಂದೇ

ಷ್ಟು ಅಪರಿಮಿತವೆಂದರೆ ಅದರಲ್ಲಿ ಒಂದು ನಿಮಿಷದಲ್ಲಿ 114,000,000 ಗ್ಯಾಲನ್ ...ರು ಹರಿಯುತ್ತದೆ. ಧುಮುಕುವ ನೀರಿನ ದಪ್ಪ ಕಡೇ ಪಕ್ಷ 20 ಅಡಿಗಳೆಂದು ...ಂದಾಜು ಮಾಡಲಾಗಿದೆ. ಜಲಪಾತದ ಮೇಲಿನ ಬಂಡೆಯ ಮೇಲೆ ನದಿಯ ...ವಾಹ ಎಷ್ಟು ಜೋರಾಗಿ ಮುಂದಕ್ಕೆ ದೂಡುತ್ತದೆಂದರೆ, ಜಲಪಾತವು ಇಳಿ...ದ್ದ ಸ್ಥಳ ಬಂಡೆಯ ಗೋಡೆಯಿಂದ 50 ಅಡಿ ಮುಂದಿರುತ್ತದೆ. ದಬದಬಿಸುತ್ತಾ ...ಮುಕುವ ಅದ್ಭುತಾಕಾರದ ಭೀಕರ ಜಲರಾಶಿಯು ಎಣ್ಣೆಯಂತೆ ಕುದಿಯುತ್ತಾ ...ಕ್ಕುತ್ತಾ, ರಾಶಿ ರಾಶಿ ಹೊಗೆಯನ್ನು ಹೊರಡಿಸುತ್ತದೆ.

ಬಹು ವಿಚಿತ್ರ ಸಂಗತಿಯೆಂದರೆ, ಜಲಪಾತವನ್ನು ತಲಪುವುದಕ್ಕೆ ಹಿಂದೆ ಸ್ವಲ್ಪ ದೂರದಲ್ಲಿ ನದಿಯ ಮೇಲೆ ಹೋಗುತ್ತಿದ್ದ ಒಂದು ದೋಣಿಯಿಂದ ರೋಜರ್ ...ದ್ ವರ್ಡ್ ಎಂಬ ಏಳು ವರ್ಷ ವಯಸ್ಸಿನ ಬಾಲಕ 1960 ರಲ್ಲಿ ಆಕಸ್ಮಿಕ ...ವಾಗಿ ನದಿಗೆ ಬಿದ್ದ. ಭೀಕರಪ್ರವಾಹವು ಅವನನ್ನು ಹೊಡೆದು ಕೊಂಡು ಹೋಗಿ ...ನಯಾಗರಾ ಜಲಪಾತಕ್ಕೆ ಸಿಕ್ಕಿಸಿತು. ಭೋರ್ಗರೆಯುವ ಜಲಪಾತವು ಅವನನ್ನು ...ಳೆದುಕೊಂಡು 160 ಅಡಿ ಕೆಳಗಿನ ಹೊಂಡಕ್ಕೆ ರೊಯ್ಯನೆ ಎಸೆಯಿತು. ಆದರೆ ಅವನ ಜೀವಕ್ಕೆ ಸ್ವಲ್ಪವೂ ಅಪಾಯವಾಗಲಿಲ್ಲ. ಆ ಬಾಲಕನಿಗೆ ಲೈಫ್ ಜಾಕೇಟ್ ವಿನಾ ಮತ್ತಾವ ಆಸರವೂ ಇರಲಿಲ್ಲ. ಮರದ ಪೀಪಾಯಿ, ಉಕ್ಕಿನ ಬಾಯ್ಲರ್‌ಗ...ಲ್ಲಿ ಕುಳಿತು, ಈ ಜಲಪಾತದೊಳಗೆ ಬಿದ್ದು, ಮೇಲಿಂದ ಕೆಳಗೆ ಉರುಳಿದ ಅನೇಕ ಸಾಹಸಿಗಳು ಮೃತರಾದರು, ಯಾವ ಆಸರವೂ ಇಲ್ಲದೆ ಈ ದೈತ್ಯ ಜಲಪಾತದಲ್ಲಿ ಉರುಳಿದ ಚಿಕ್ಕ ಬಾಲಕನು ಗಾಯವಾಗಲೀ ನೋವಾಗಲೀ ಆಗದೆ ಬದುಕಿಕೊಂಡದ್ದು ಎಂಥ ಆಶ್ಚರ್ಯ !

## ತಿಮಿಂಗಿಲದ ಹೊಟ್ಟೆಯಲ್ಲಿ ಮನುಷ್ಯ !

ಪ್ರಚಂಡ ಗಾತ್ರದ ಸ್ಪರ್ಮ್ ತಿಮಿಂಗಿಲ 60–70 ಅಡಿ ಉದ್ದ, 100 ಟನ್ ಭಾರವಿರುತ್ತದೆ. ಅದು ಒಂದು ದಿನಕ್ಕೆ ಒಂದು ಟನ್‌ನಷ್ಟು ಆಹಾರವನ್ನು ಕಬಳಿಸುತ್ತದೆ. ಅದರ ತಲೆಯಲ್ಲಿರುವ ಪೊಳ್ಳಿನಲ್ಲಿ ಹತ್ತು ಟನ್ ಎಣ್ಣೆ ತುಂಬಿರುತ್ತದೆ. U–ಆಕಾರದ ಅದರ ಬಾಯಿಯಲ್ಲಿ 8–10 ಅಂಗುಲ ಉದ್ದದ 28 ಹಲ್ಲುಗಳಿವೆ. ಬಹು ಬಲಿಷ್ಠ ದವಡೆಗಳು, ಗಂಟಲು ಬಹು ಅಗಲ, ಅದನ್ನು ವಿಪರೀತ ಹಿಗ್ಗಿಸಲು ಸಾಧ್ಯ, ಆಗ ತಿಮಿಂಗಿಲವು ಬಹು ದೊಡ್ಡ ಪ್ರಾಣಿಯನ್ನೂ ಒಂದೇ ಸಾರಿಗೆ ನುಂಗುತ್ತದೆ. ಅದರ ಹೊಟ್ಟೆ ಎಷ್ಟು ಅಗಾಧವೆಂದರೆ ಮನುಷ್ಯನಿಗಿಂತಲೂ ದೊಡ್ಡದಾದ ಆಕ್ಟೋಪಸ್‌ನ ಇಡೀ ಶರೀರ, 16 ಅಡಿ ಉದ್ದದ ಷಾರ್ಕಿನ ಇಡೀ ಅಸ್ಥಿಪಂಜರ ಅದರ ಹೊಟ್ಟೆಯಲ್ಲಿ ಸಿಕ್ಕಿದೆ.

ಒಮ್ಮೆ ತಿಮಿಂಗಿಲ ಬೇಟೆಗೆ ಹೋಗಿದ್ದ ಕೆಲವರು ಒಂದು ತಿಮಿಂಗಿಲವನ್ನು ಭರ್ಜಿಯಿಂದ ಚುಚ್ಚಿದಾಗ ಅದು ತನ್ನ ದವಡೆಹಲ್ಲುಗಳಿಂದ ದೋಣಿಯನ್ನು ಚೂರು ಚೂರಾಗಿ ಕತ್ತರಿಸಿ, ದೋಣಿಯಲ್ಲಿದ್ದ ಮಾರ್ಷಲ್ ಜೆಂಕಿನ್ಸ್ ಎಂಬುವನನ್ನು ನುಂಗಿ ಸಮುದ್ರದೊಳಗೆ ಮುಳುಗಿತು. ಉಸಿರಾಡಲು ಅದು ಕೊನೆಯ ಸಾರಿ ನೀರಿನ ಮೇಲೆ ಬಂದಾಗ ಮರಣ ವೇದನೆಯಲ್ಲಿ ಅವನನ್ನು ಪೂರ್ತಿ ವಾಂತಿಮಾಡಿತು. ರೌದ್ರಾವೇಶದಲ್ಲಿದ್ದ ತಿಮಿಂಗಿಲಗಳು ಅನೇಕ ಜನರನ್ನು ನುಂಗಿಹಾಕಿದವು, ಆದರೆ ಅವುಗಳ ಹೊಟ್ಟೆಯಿಂದ ಬದುಕಿ ಬಂದವರು ಅಪೂರ್ವ.

ಫಾಕ್ಲೆಂಡ್ ದ್ವೀಪಗಳ ಸುತ್ತಮುತ್ತ ಸ್ಪರ್ಮ್ ತಿಮಿಂಗಿಲಗಳು ಪುಷ್ಕಳವಾಗಿದ್ದವು. 1891 ರ ಆಗಸ್ಟ್‌ನಲ್ಲಿ ಕೆಲವು ಬೇಟೆಗಾರರು "ಸ್ಟಾರ್ ಆಫ್ ದಿ ಈಸ್ಟ್" ಎಂಬ ಇಂಗ್ಲಿಷರ ಹಡಗಿನಲ್ಲಿ ಆ ಕ್ಷೇತ್ರಕ್ಕೆ ಹೋಗುತ್ತಿದ್ದರು. ಮೂರು ಮೈಲಿ ದೂರದಲ್ಲಿ ಒಂದು ತಿಮಿಂಗಿಲವು ಕಾಣಿಸಿತು. ಅದನ್ನು ಬೇಟೆಮಾಡಲು ಆರು ಮಂದಿ ನಾವಿಕರು ಹಡಗಿನಿಂದ ಇಳಿದು ಎರಡು ದೋಣಿಗಳಲ್ಲಿ ಹೊರಟರು. ಅವರಲ್ಲೊಬ್ಬನು "ಹಾರ್ಪೂನ್" ಎಂಬ ಭರ್ಜಿಯಿಂದ ಆ ತಿಮಿಂಗಿಲದ ಬೆನ್ನನ್ನು ಇರಿದ. ಅದು ನೋವಿನಿಂದ ಚಡಪಡಿಸುತ್ತಾ ರೋಷದಿಂದ ಹಲ್ಲುಗಳನ್ನು ಕಟಕಟ ಕಡಿಯುತ್ತಾ, ನೀರಿನಲ್ಲಿ ಮುಗಚಿಕೊಳ್ಳಲು ಅದರ 12 ಅಡಿ ಅಗಲದ ಬಾಲವು ಮೇಲಕ್ಕೆದ್ದು ಒಂದು ದೋಣಿಯನ್ನು ರಭಸದಿಂದ ಹೊಡೆದು ಉರುಳಿಸಿತು. ಅದರಲ್ಲಿದ್ದವರೆಲ್ಲ ಸಮುದ್ರದೊಳಕ್ಕೆ ಎಸೆಯಲ್ಪಟ್ಟರು. ಅವರಲ್ಲೊಬ್ಬ ಸತ್ತುಹೋದ. ಉಳಿದವರನ್ನು ಇನ್ನೊಂದು ದೋಣಿಯವರು ರಕ್ಷಿಸತೊಡಗಿದರು. ಜೇಮ್ಸ್ ಬಾರ್ಟಲೇ ಎಂಬ 35 ವರ್ಷದ ಬಲಿಷ್ಟ ಯುವಕ ಮಾಯವಾಗಿದ್ದ. ಎಷ್ಟು ಹುಡುಕಿದರೂ ಅವನ ಸುಳಿವೇ ಸಿಕ್ಕಲಿಲ್ಲ.

ನಾವಿಕರು ತಮ್ಮ ಬೇಟೆಯನ್ನು ಮುಗಿಸಲು ತಿಮಿಂಗಿಲಕ್ಕಾಗಿ ಕಾದಿದ್ದು ಅದನ್ನು ಭರ್ಜಿಯ ಏಟಿನಿಂದ ಕೊಂದು ತಮ್ಮ ಹಡಗಿಗೆ ಎಳೆತಂದರು. ಆ ದಿನ ಇಡೀ ಹಗಲು ಮತ್ತು ರಾತ್ರಿ ಅವರು ಶವವನ್ನು ಕತ್ತರಿಸಿ ಅದರೊಳಗಿದ್ದ ಕೊಬ್ಬನ್ನೆಲ್ಲಾ ಶೇಖರಿಸಿದರು. ಇದಕ್ಕೆ 48 ಗಂಟೆಗಳಕಾಲ ಹಿಡಿಯಿತು. ನಂತರ ಹೊಟ್ಟೆಯ ಭಾಗವನ್ನು ಹಡಗಿನೊಳಗೆ ಸಾಗಿಸಿದರು. ಹೊಟ್ಟೆಯೊಳಗೆ ಏನೋ ಚಲನವಲನವಿರುವಂತೆ ಅವರಿಗೆ ಕಂಡು ಬಂತು. ತಿಮಿಂಗಿಲವು ನುಂಗಿದ್ದ ಯಾವುದೋ ದೊಡ್ಡ ಪ್ರಾಣಿ ಇನ್ನೂ ಬದುಕಿದೆಯೆಂದು ಊಹಿಸಿ ಹೊಟ್ಟೆಯನ್ನು ಕತ್ತರಿಸಿದರು. ಮನುಷ್ಯನ ಆಕೃತಿಯೊಂದು ಕೈಕಾಲು ಮಡಚಿಕೊಂಡು ರಕ್ತದಲ್ಲಿ ತೊಯ್ದು ಒಳಗೆ ಬಿದ್ದಿರುವುದನ್ನು ಕಂಡು ಬೆಕ್ಕಸಬೆರಗಾದರು, ಅದು ಜೇಮ್ಸ್ ಬಾರ್ಟಲೆಯೆಂದು ಸ್ಪಷ್ಟವಾಯಿತು.

ಕೂಡಲೆ ಎಲ್ಲರೂ ಸೇರಿ ಆ ಶರೀರವನ್ನು ಮಾಂಸಪೇಶಿಗಳಿಂದ ಪ್ರತ್ಯೇಕಿಸಿ ತೆಗೆದರು. ನಾಡಿಪರೀಕ್ಷೆಯಿಂದ ಬಾರ್ಟಲೆ ಬದುಕಿದ್ದಾನೆಂದು ತಿಳಿಯಿತು. ಅವನನ್ನೆತ್ತಿ

ಹಡಗಿನಲ್ಲಿ ಮಲಗಿಸಿ ಅವನ ದೇಹವನ್ನು ತೊಳೆದರು. ಎಣ್ಣೆಯನ್ನು ಮೈಗೆ ಸವರಿ ಐದು ಗಂಟೆಕಾಲ ಮಾಲೀಸು ಮಾಡಿದರು. ಆಗ ಅವನು ಕೆಫ್ಮಿದ, ಗೊಣಗುಟ್ಟಿದ ಎಚ್ಚರವಾಯ್ತು, ಆದರೆ ಪ್ರಜ್ಞೆಬರಲಿಲ್ಲ, ಹಡಗಿನ ಕಪ್ತಾನ ಅವನನ್ನು ತನ್ನ ಕೊಠಡಿಯುಲ್ಲಿ ಮಲಗಿಸಿದ, ಎರಡು ವಾರ ಅವನನ್ನು ಅಲ್ಲೇ ಇಟ್ಟು ಬೀಗ ಹಾಕಿದ್ದರು, ಅವನು ಬಡಬಡಿಸುತ್ತಾ ಹುಚ್ಚನಂತೆ ವರ್ತಿಸಿದ. ಎಲ್ಲರೂ ತಬ್ಬಿಬ್ಬಾಗಿ ಅವನು ಮೊದಲ ಸ್ಥಿತಿಗೆ ಬರಲಾರನೆಂದು ನಂಬಿದರು. ಕೆಲವು ದಿನಗಳವರೆಗೆ ಅವನು ಯಾರನ್ನೂ ಗುರುತಿಸಲಿಲ್ಲ. ಕ್ರಮೇಣ ಅವನ ಬುದ್ಧಿ ಸ್ಥಿಮಿತಕ್ಕೆ ಬಂತು, ಮೂರು ವಾರಗಳಲ್ಲಿ ಅವನು ಮಾನಸಿಕ ಆಘಾತದಿಂದ ಚೇತರಿಸಿಕೊಂಡಿದ್ದ. ದೇಹ ದಾರ್ಢ್ಯಪೂ ಸಮರ್ಪಕವಾಗಿತ್ತು. ಅವನು ತಿಮಿಂಗಿಲಬೇಟೆಯ ನಾವಿಕವೃತ್ತಿಯನ್ನು ಪುನಃ ಆರಂಭಿಸಿದ. ಅವನು ತಿಮಿಂಗಿಲದ ಹೊಟ್ಟೆಯಲ್ಲಿ 60 ಗಂಟೆ ಕಾಲ ಇದ್ದಾಗ ಬಟ್ಟೆಯಿಂದ ಮುಚಲ್ಪಡದಿದ್ದ ಅವನ ಮುಖ, ಕತ್ತು, ಕೈಗಳು ತಿಮಿಂಗಿಲದ ಜಠರ ರಸಗಳ ತೀಪ್ರ ಆಮ್ಲಗಳಿಂದ ಸುಟ್ಟು ಬಿಳಚಿಕೊಂಡು ಸುಕ್ಕುಗಟ್ಟಿದ್ದವು.

## ಸುರಂಗದಲ್ಲಿನ ಅಪಘಾತ

ಒತ್ತಡದ ವಾಯುವಿನಿಂದ ಚಲಿಸುವ ಯಂತ್ರಗಳ ಮತ್ತು ಇತರ ಆಧುನಿಕ ಪರಿಕರಣಗಳ ಆವಿಷ್ಕರಣಗಳ ನಂತರ ಭೋರ್ಗರೆಯುವ ನದಿಗಳ ಪಾತ್ರದ ಕೆಳಗೂ ಸುರಂಗಗಳು ನಿರ್ಮಿತವಾದವು. ಉದಾಹರಣೆಗೆ ಮರ್ಸೀ ನದಿಯ ಬುಡದ ಕೆಳಗೆ, ಸೆವರ್ನ್ ನದಿ ಸಮುದ್ರಕ್ಕೆ ಸೇರುವ ಅಳಿವೆಯ ಕೆಳಗೆ, ಹಡ್ಸನ್ ನದಿ ಕೆಳಗೆ, ನ್ಯೂಯಾರ್ಕ್ ಸಮುದ್ರ ರೇವಿನ ಕೆಳಗೆ, ಎಲ್ಬ್, ಥೇಮ್ಸ್ ಮುಂತಾದ ಅನೇಕ ನದಿಗಳ ಪಾತ್ರದ ಕೆಳಗೆ ಸುರಂಗಗಳಿವೆ.

ಅಮೇರಿಕದ ಒಂದು ನದಿಯ ಬುಡದ ಕೆಳಗೆ ಸುರಂಗ ನಿರ್ಮಿಸುತ್ತಿದ್ದಾಗ, ಆ ಸುರಂಗದ ಚಾವಣಿಯು ನದೀ ಬುಡದಿಂದ ಐದು ಅಡಿ ಕೆಳಗಿತ್ತು. ಆ ಚಾವಣಿಯಲ್ಲಿದ್ದ ಒಂದು ರಂಧ್ರದಿಂದ ನದಿಯ ನೀರು ಕೆಳಗೆ ಒಸರುತ್ತಿತ್ತು. ಅದನ್ನು ದುರಸ್ತು ಮಾಡಲು ರಂಧ್ರದ ಬಳಿ ನಿಂತಿದ್ದ ಮನುಷ್ಯನನ್ನು ಆ ಸುರಂಗದೊಳಗಿಟ್ಟಿದ್ದ ಯಂತ್ರದ ಒತ್ತಡದ ವಾಯು ಮೇಲಕ್ಕೆ ಎತ್ತಿ ಎಸೆಯಿತು. ಅದು ಅವನನ್ನು ಮಿಂಚಿನವೇಗದಲ್ಲಿ ಆ ರಂಧ್ರದಿಂದ ಹೊರಗೆ ತೂರಿಸಿ ನದಿಯಲ್ಲಿದ್ದ ಹದಿನೈದು ಅಡಿಗಳಾಳದ ನೀರಿನ ಮೇಲ್ಭಾಗಕ್ಕೆ ರೊಯ್ಯನೆ ಬಿಸುಟಿತು, ಅವನು ಮೃತನಾಗಬೇಕಾಗಿತ್ತು. ಆದರೆ. ಸುದೈವದಿಂದ ಅಲ್ಲಿ ಹೋಗುತ್ತಿದ್ದ ಒಂದು ದೋಣಿ ಅವನನ್ನು ರಕ್ಷಿಸಿತು.

ಅಮೇರಿಕದ ಕ್ರಾಂತಿಯ ಕಾಲದಲ್ಲಿ ನಡೆದ ಯುದ್ಧದಲ್ಲಿ ಬಹು ಶೂರನೆಂದು ಖ್ಯಾತನಾಗಿದ್ದ ಮರ್ಫಿ ಎಂಬಾತನನ್ನು ಹಿಡಿದು ಕೊಲ್ಲಬೇಕೆಂದು ಶತ್ರುಸೇನೆಯವರು ಅವನನ್ನು ಹುಡುಕುತ್ತಿದ್ದರು. ಅವರ ಕಣ್ಣಿಗೆ ಬೀಳದೆ ಅವರಿಂದ ಪಾರಾಗಲು ಮರ್ಫಿ ತನ್ನ ಮೇಲೆ 125 ಅಡಿಗಳೆತ್ತರದಿಂದ ಗುಡುಗಿನ ಆರ್ಭಟದಲ್ಲಿ ಬೀಳುತ್ತಿದ್ದ ಒಂದು ಜಲಪಾತದ ಕೆಳಗೆ ಇಡೀ ರಾತ್ರಿ ಅವಿತುಕೊಂಡಿದ್ದ ಅದು ಅವನ ಜೀವವನ್ನು ಉಳಿಸಿತು.

---

(36 ನೇ ಪುಟದಿಂದ).

ಮೇಲಿನ ಶ್ಲೋಕಗಳಲ್ಲಿ ಆಧಾರವಾಗಿ ತೆಗೆದುಕೊಂಡಿರುವ ವಾಯುವೀಯದಲ್ಲಿ "ಪೂಜಾಂ ಕೃತ್ವಾಥ ತಲ್ಲಿಂಗಂ ಶಿರಸಾಧಾರಯೇತ್ ಸದಾ,, ಎಂದೂ, ಕೂರ್ಮ ಪುರಾಣದಲ್ಲಿ "ಲಿಂಗ ರುದ್ರಾಕ್ಷಧಾರಣಂ ವೈದಿಕಂ ಭವೇತ್,, ಎಂದೂ ಶುದ್ಧಶೈವಕ್ಕೆ ಪ್ರಥಮ ಆಧಾರ ಗ್ರಂಥವಾದ ಸೂತ ಸಂಹಿತೆಯಲ್ಲಿ "ತ್ರಿಪುಂಡ್ರ ಲಿಂಗಂತು ಸದೈವ ಧಾರಯೇತ್,, ಎಂದೂ ಹೇಳಿದೆ. ಶುದ್ಧ ಶೈವ ವೈದಿಕ ಬ್ರಾಹ್ಮಣ ಇಷ್ಟಲಿಂಗಾರ್ಚಕ ಜಂಗಮ ಸಂಪ್ರದಾಯದವರೆಂಬುದು ಸ್ಪಷ್ಟವಾಗಿದೆ.

---

## ಶಿವ ಪೂಜೆ

—ನ. ಮುನಿಸ್ವಾಮಿ

ತಮಿಳು : ಉಳ್ಳಂ ಪೆರುಂಕೋಯಿಲ್ ಊನ್‌ಉಡಂಬು ಆಲಯಂ
ವಳ್ಳಲ್ ಪಿರನಾರ್‌ಕ್ಕು ವಾಯ್ ಗೋಬುರವಾಶಲ್
ತೆಳ್ಳ ತ್ತೆಳಿಂದಾರ್‌ಕ್ಕು ಚ್ಚೀವನ್ ಶಿವಲಿಂಗಂ
ಕಳ್ಳ ಪುಲನ್ಐಂದುಂ ಕಾಳಾ ಮಣಿ ವಿಳಕ್ಕೇ.

ಕನ್ನಡ : ಮನವೇ ಮಂದಿರ ಮಾಂಸದೊಡಲೇ ಮಹದಾಲಯ
ಮಹಾದಾನಿ ಪರಮಂಗೆ ಬಾಯಿಯೇ ಗೋಪುರದ್ವಾರ
ತಿಳಿವರಿವು ಉಳ್ಳವರಿಗೆ ಜೀವನೇ ಶಿವಲಿಂಗ
ಕಳ್ಳ ಕರಣಗಳೈದು ಉರಿವ ಜ್ಯೋತಿಗಳಯ್ಯಾ!

(ತಿರುಮಂದಿರಂ ತಮಿಳು ಶೈವ ಸಿದ್ಧಾಂತ ಕೃತಿಇಂದ)

---

## ಆಧುನಿಕ ಚುಟುಕ

—ಜಿ. ಶಾರದರಾಜಶೇಖರ್

ರೈತರ ಮೇಳ ನಡೆಸಿದರು ದೆಹಲಿಯಲಿ
ಭೂತಕಾಲದ ಗೋಳು ಬಿಡಿ, ಭವಿ
ಷ್ಯತ್ತಿನಲಿ ಜಾದು ಮಾಡುವೆ ವೆಂದರು
ಮಾತ ಕೇಳಿ ಬೆರಗಾಗಿ ಸೋತಮುಖದಲಿ ಹಿಂತಿರುಗಿದರು.

# ಕಾಶ್ಮೀರ ಶಿವಾದ್ವೈತ ಸಿದ್ಧಾಂತ

—ಡಿ. ಜಿ. ರುದ್ರಪ್ಪ

ತಿಳಿಯುವುದಕ್ಕೆ ಸಾಧ್ಯವಿಲ್ಲದ ವಿಷಯಗಳನ್ನು ಸ್ವಚ್ಛಜ್ಞಾನದಿಂದ (ಸೋಪಜ್ಞತಾವೃತ್ತಿಯಿಂದ) ಅನುಭವಿಸುತ್ತಾನೆ. ವಿಶ್ವವೇ ಇವನಿಗೆ ಪ್ರಮೇಯ. ವಿಶ್ವಜ್ಞಾನವೇ ಪ್ರಮಿತಿ. ನಿಸ್ತರಂಗವಾದ ಚಿತ್ಸ್ವರೂಪಾನುಭವದಲ್ಲಿ ಪ್ರಮಾಣವೇ ಮೊದಲಾದ ಈ ನಾಲ್ಕು ಭೇದಗಳಿಲ್ಲ. ನಿಸ್ತರಂಗವಾದ ಚಿತ್ಸ್ವರೂಪವೇ ಪರಮಶಿವ ವಿಶ್ವವು ಆತನಿಗಿಂತ ಬೇರೆಯಾಗಿಲ್ಲದಿರುವುದರಿಂದ ಆತನನ್ನು ತಿಳಿಯುವುದಕ್ಕೆ ಬೇರೆ ಸಾಧನಗಳಿಲ್ಲ. ಆತನೇ ಸಾಧನ ಮತ್ತು ಸಾಧ್ಯವೂ ಆಗಿರುತ್ತಾನೆ. ಹೇಗೆಂದರೆ ದೀಪವು ಕತ್ತಲೆಯಲ್ಲಿ ಇತರ ಪದಾರ್ಥಗಳನ್ನು ತೋರ್ಪಡಿಸುತ್ತದೆ. ದೀಪವನ್ನು ತೋರಿಸುವುದಕ್ಕೆ ಬೇರೆ ದೀಪವು ಬೇಕಿಲ್ಲ. ಅದು ತನ್ನನ್ನೇ ತಾನು ತೋರ್ಪಡಿಸಿಕೊಳ್ಳುತ್ತದೆ. ಇತರ ಪದಾರ್ಥಗಳನ್ನೂ ತೋರ್ಪಡಿಸುತ್ತದೆ. ಹಾಗೆಯೇ ಚಿತ್ತು ಸ್ವಸ್ವರೂಪವನ್ನು ತಾನೇ ತೋರ್ಪಡಿಸಿಕೊಳ್ಳುತ್ತಾ ಇತರ ಪದಾರ್ಥಗಳ ತಿಳಿವಳಿಕೆಯನ್ನು ಉಂಟುಮಾಡುತ್ತದೆ.

ಸ್ವಯಂಪ್ರಕಾಶನವಾದ ಚಿತ್ತು ಸ್ವತಂತ್ರವಾದದ್ದು. ಸರ್ವ ಶಕ್ತಿಗಳನ್ನೂ ಒಳಗೊಂಡಿರುವಂಥಾದ್ದು. ಎಲ್ಲಕ್ಕೂ ಕಾರಣವಾದದ್ದು. ಸುಖೋಪಾಯವಾದದ್ದು. ಇದನ್ನೇ ಅನುತ್ತರ, ಪರಾಸಂವಿತ್, ಪರಮಶಿವ ಎಂದು ಕರೆಯುವುದು. ಪರಮಶಿವನು ಅಲೆಗಳಿಲ್ಲದ ಸಮುದ್ರದಂತೆ ಪ್ರಶಾಂತನಾಗಿರುತ್ತಾನೆ. ಈ ಸ್ಥಿತಿಯಲ್ಲಿ ಈತನು ವಿಶ್ವೋತ್ತೀರ್ಣ ಅಥವಾ ವಿಶ್ವಾತೀತನೆನಿಸಿಕೊಳ್ಳುತ್ತಾನೆ. ಈತನು ಯಾವಾಗಲೂ ಚಿದಾನಂದಘನನಾಗಿ ಪರಿಪೂರ್ಣನಾಗಿರುತ್ತಾನೆ. ಈ ಪರಮಶಿವನು ತನ್ನ ಸ್ವಾತಂತ್ರ್ಯ ಶಕ್ತಿ ಚಮತ್ಕಾರದಿಂದ ಮೂವತ್ತಾರು ತತ್ವಗಳ ರೂಪವನ್ನೂ ಸಪ್ತಪ್ರಮಾತೃಭಾವವನ್ನೂ ಪಡೆಯುತ್ತಾನೆ. ಇದು ವಿಶ್ವಾತ್ಮಕ ಸ್ಥಿತಿ.

ನಿಸ್ತರಂಗವಾದ ಸಮುದ್ರದಲ್ಲಿ ಸೂಕ್ಷ್ಮದಲ್ಲಿ ಅಲೆಗಳುಂಟಾಗುವಂತೆ ಆಗುವ ಚಿತ್ಸಮುದ್ರದ ಚಲನವೇ ಶಕ್ತಿ ಅಥವಾ ಚಿಚ್ಛಕ್ತಿ. ಈ ಚಿಚ್ಛಕ್ತಿಯೇ ಜ್ಞಾನ ಇಚ್ಛಾ ಕ್ರಿಯಾ ಎಂಬ ಮೂರು ಭೇದಗಳಿಂದ ಪ್ರಸರಿಸುತ್ತದೆ. ಮೊದಲನೆಯ ಚಲನಕ್ಕೇ ಸ್ಪಂದ, ಸ್ಫುರತ್ತಾ, ಉನ್ಮೇಷ ಎಂದು ಹೇಳುವುದು. ಇದರಿಂದಲೇ ಪ್ರಪಂಚಸೃಷ್ಟಿ.

ಮೊದಲನೆಯ ತತ್ವವಾದ ಶಿವತತ್ವದಿಂದ ಭೂಮಿವರೆಗೂ ಇರುವ ಮೂವತ್ತಾರು ತತ್ವಗಳು ಶಕ್ತಿಪ್ರಕರಣ ಕ್ರಮದಿಂದ ರೂಪುಗೊಳ್ಳುತ್ತವೆ. ಶಿವ ಶಕ್ತಿ ಈ ಎರಡು ತತ್ವಗಳಲ್ಲಿ ಗ್ರಾಹ್ಯ ಗ್ರಾಹಕ ಭೇದಗಳಿಲ್ಲ. ಶಕ್ತಿತತ್ವದಲ್ಲಿ ಇಚ್ಛಾ ಜ್ಞಾನ ಕ್ರಿಯಾ ಶಕ್ತಿಗಳ ಆವಿರ್ಭಾವವಾಗಿರುತ್ತದೆ. ಮೂರನೆ ತತ್ವವಾದ ಸದಾಶಿವ ತತ್ವದಿಂದ ಗ್ರಾಹ್ಯ ಗ್ರಾಹಕ ಭಾವವು ಅಂಕುರಿಸುತ್ತದೆ. ಮುಂದಿನ ತತ್ವ ಸೃಷ್ಟಿಯಲ್ಲಿ ತತ್ವಗಳ ಗನುರೂಪವಾದ ಗ್ರಾಹಕ ವರ್ಗಗಳೇರ್ಪಡುತ್ತವೆ. ಇಚ್ಛಾ ಜ್ಞಾನ ಕ್ರಿಯಾ ಎಂಬ ಮೂರು ಶಕ್ತಿಗಳು ಈ ಶಕ್ತಿಗಳು ವಿಶ್ವರೂಪವಾಗಿ ಅನಂತ ಭೇದಗಳನ್ನು ಪಡೆದಿರುತ್ತವೆ. ಗ್ರಾಹ್ಯ ಗ್ರಾಹಕ ಭೇದದಿಂದಿರುವ ವಿಶ್ವವನ್ನು ಹೊರಹೊಮ್ಮಿಸುವ ಮತ್ತು ಉಪಸಂಹರಿಸುವ ಚಮತ್ಕಾರವೂ ಈ ಚಿಚ್ಛಕ್ತಿಗೆ ಸೇರಿದುದು.

ಚಿಚ್ಛಕ್ತಿಯ ಸ್ವಾತಂತ್ರ್ಯ ಚಮತ್ಕಾರವು ವಿಲಕ್ಷಣವಾದದ್ದು.

"ವಿಮರ್ಶೋಹಿ ಸರ್ವಂಸಹಃ ಪರಮಪಿ ಆತ್ಮೀಕರೋತಿ
ಆತ್ಮಾನಂಚ ಪರೀಕರೋತಿ ಉಭಯಮೇಕೀಕರೋತಿ
ಏಕೀಕೃತಂ ದ್ವಯಮಪಿ ನ್ಯಗ್ಭಾವಯತಿ ಇತ್ಯೇವಂ ಸಭಾವಾಃ" ।

ಈಶ್ವರಪ್ರತ್ಯಭಿಜ್ಞಾ ವಿಮರ್ಶಿನಿ.

ಚಿಚ್ಛಕ್ತಿಯು ಎಲ್ಲವನ್ನೂ ಒಳಗೊಂಡಿರುವಂಥಾದ್ದು. ಬಾಹ್ಯ ಪ್ರಪಂಚವನ್ನು (ಇದಂತಾ) ತನ್ನಲ್ಲಿಯೇ ಸೇರಿಕೊಳ್ಳುತ್ತದೆ. 'ಅಹಂ' ಎಂಬ ತನ್ನ ಸ್ವರೂಪವನ್ನು 'ಇದಂ' ಎಂಬ ಗ್ರಾಹ್ಯರೂಪವಾಗಿಯೂ ತೋರಿಸುತ್ತದೆ. ಈ ಗ್ರಾಹ್ಯ ಗ್ರಾಹಕ ಭಾವಗಳನ್ನು ಅಭಿನ್ನವಾಗಿಯೂ ತೋರಿಸುತ್ತದೆ. ಹಾಗೆಯೇ ಮರೆಮಾಚುತ್ತದೆ. ಇಂತಹ ವಿಲಕ್ಷಣ ಚಮತ್ಕಾರ ಸ್ವಭಾವವುಳ್ಳದ್ದು ಚಿತ್ತು.

ಚಿಚ್ಛಕ್ತಿಗೆ ದೇಶ ಕಾಲ ಆಕಾರಗಳ ಭೇದವಿಲ್ಲ. ಆದರೂ ಅದರಿಂದಲೇ ಉದ್ಭವಿಸಿರುವ ವಿಶ್ವವು ದೇಶ ಕಾಲ ಆಕಾರಗಳಿಂದಲೇ ವ್ಯವಹಾರಕ್ಕೆ ಯೋಗ್ಯವಾಗುತ್ತದೆ.

ದೇಶಕಾಲಾಕಾರ ಭೇದಃ ಸಂವಿದೋ ನಹಿಯುಜ್ಯತೇ ।
ತಸ್ಮಾದೇಕೈವ ಪೂರ್ಣಾಹಂ ವಿಮರ್ಶಾತ್ಮಾ ಚಿದುಚ್ಯತೇ ॥

ದೇಶ ಕಾಲಾಕಾರ ಸಹಿತವಾಗಿರುವ ಈ ವಿಶ್ವಕ್ಕೆ ಚಿಚ್ಛಕ್ತಿಯು ಕಾರಣ. ಅದು ಯಾವಾಗಲೂ ವ್ಯಾಪಕವಾಗಿಯೂ ಸ್ವಯಂ ಪ್ರಕಾಶವಾಗಿಯೂ ಪರಿಪೂರ್ಣವಾಗಿಯೂ ಇರುತ್ತದೆ. ಸೃಷ್ಟಿ ಸ್ಥಿತಿ ಸಂಹಾರಗಳನ್ನು ಬೇರೆ ಸಾಧನಗಳ ಅಪೇಕ್ಷೆಯಿಲ್ಲದೆ ನಿರ್ವಹಿಸುತ್ತಿರುವುದರಿಂದ ಸ್ವತಂತ್ರವಾಗಿದೆ. ಈ ಶಕ್ತಿಯ ಪ್ರಸರದಿಂದಲೇ ಸೃಷ್ಟಿ ಸ್ಥಿತಿಗಳು ನಡೆಯುತ್ತಿರುವುದು. ಈ ಶಕ್ತಿಯು ತನ್ನ ಪ್ರಸರವನ್ನು ಉಪಸಂಹರಿಸಿಕೊಂಡರೆ ಪ್ರಳಯ ಅಥವಾ ಸಂಹಾರವೆಂದೂ ಹೇಳಲ್ಪಡುತ್ತದೆ.

ಶಕ್ತಿ ಪ್ರಸರಣ ಕ್ರಮದಲ್ಲಿ ನಾವು ಇನ್ನೂ ಒಂದು ಚಮತ್ಕಾರವನ್ನು ಗಮನಿಸಬಹುದು. ಚಿಚ್ಛಕ್ತಿಯು ಅಭೇದ ವಿಮರ್ಶನ ರೂಪಿಯಾಗಿ ಪಶ್ಯಂತೀ ಮಧ್ಯಮಾ

ೂಪಗಳಿಂದ ವಿರಾಜಿಸುತ್ತಿದ್ದು ವೈಖರ್ಯವಸ್ಥೆಯಲ್ಲಿ ಭೇದವನ್ನೇ ಮಿತ ಪ್ರಮಾತೃ ಪದ ಜೀವನಿಗೆ ಉಂಟುಮಾಡುತ್ತಿರುತ್ತದೆ. ಪರಾ ಪಶ್ಯಂತೀ ಮಧ್ಯಮಾ ವೈಖರೀ ಈ ನಾಲ್ಕು ಸ್ಥಿತಿಗಳೂ ಅನಂತ ಶಕ್ತಿಯುಳ್ಳ ಚಿಚ್ಛಕ್ತಿಯ ಪ್ರಕಾರಗಳೆಂದು ತಿಳಿದು ಪಾಸಿಸುವರಿಗೆ ಮುಕ್ತಿಯುಂಟಾಗುತ್ತದೆ.

ಸೇಯಂ ಕ್ರಿಯಾತ್ಮಿಕಾಶಕ್ತಿಃ ಶಿವಸ್ಯ ಪಶುವರ್ತಿನೀ ।
ಬಂಧಯಿತ್ರೀ ಸ್ವಮಾರ್ಗಸ್ಥಾ ಜ್ಞಾತಾಸಿದ್ಧ್ಯುಪಪಾದಿಕಾ ॥
(ಸ್ಪಂದಕಾರಿಕಾ)

ಹೀಗೆ ಪರಮಶಿವನು ಅನಂತ ರೂಪಗಳಿಂದ ವಿಶ್ವರೂಪಿಯಾಗಿ ವಿರಾಜಿಸುತ್ತಿದ್ದನೆ. ಇದು ಆತನ ಲೀಲೆ.

ಈಶ್ವರನಿಗೆ ಚಿತ್, ಆನಂದ, ಇಚ್ಛಾ, ಜ್ಞಾನ, ಕ್ರಿಯಾ ಎಂಬ ಐದು ಶಕ್ತಿಗಳು ತ್ಯವಾಗಿರುತ್ತವೆ. ವಿಶ್ವಾತೀತನಾದ ಪರಮಶಿವನಲ್ಲಿಯೂ ವಿಶ್ವಾತ್ಮಕನಾದ ಶಿವ ಲ್ಲಿಯೂ ಈ ಗುಣಗಳು ಸಮಾನವಾಗಿಯೇ ಇವೆ. ಪರಮ ಶಿವನು ಇನ್ನೊಂದು ಸ್ತುವಿನ ಆಶ್ರಯವಿಲ್ಲದೆ ಸ್ವಯಂ ಪ್ರಕಾಶನು ಇನ್ನೊಂದರ ಸಹಾಯವಿಲ್ಲದೆ ತನ್ನ ಯೇ ಆನಂದವನ್ನು ಪಡೆಯುವ ಶಕ್ತಿಯುಳ್ಳವನಾಗಿಯೂ ಗ್ರಾಹ್ಯ ಗ್ರಾಹಕ ವ್ಯವ ಕಾರಗಳನ್ನು ತನ್ನಲ್ಲಿ ಒಳಗೊಂಡಿರುವ ಜ್ಞಾನ ಶಕ್ತಿಯುಳ್ಳವನಾಗಿಯೂ ಅನೇಕ ರೂಪಗಳಿಂದ ಪದಾರ್ಥಗಳನ್ನು ಸೃಷ್ಟಿಮಾಡುವ ಕ್ರಿಯಾಶಕ್ತಿಯುಳ್ಳವನಾಗಿಯೂ ಹೀಗೆ ಪಂಚಶಕ್ತಿಗಳುಳ್ಳವನಾಗಿ ಯಾವಾಗಲೂ ಪಂಚಕೃತ್ಯಗಳನ್ನು ಮಾಡುತ್ತಿರುತ್ತಾನೆ❀. ಪಂಚಕೃತ್ಯಗಳು ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನ ಅನುಗ್ರಹ. ಇಲ್ಲಿ ಸೃಷ್ಟಿ ಅಂದರೆ ವಿಶ್ವಸೃಷ್ಟಿ. ಸ್ಥಿತಿ ಅಂದರೆ ಹಾಗೆ ಸೃಷ್ಟಿಮಾಡಿದ್ದನ್ನು ಕಾಪಾಡುವುದು. ಸಂಹಾರ ಅಂದರೆ ಪುನಃ ಸ್ಮೃತಿಗೆ ಬರುವ ಸ್ಥಿತಿಯಲ್ಲಿರಿಸುವಿಕೆ.

ಅನುಗ್ರಹವೆಂದರೆ ಸಂಸ್ಕಾರ ರೂಪದಲ್ಲಿಲ್ಲದೆ ಸ್ಮರಿಸುವುದಕ್ಕವಕಾಶವಿಲ್ಲದಂತೆ ಚಿತ್ತಿನಲ್ಲಿಯೇ ಸಂಪೂರ್ಣವಾಗಿ ಲಯವಾಗುವುದು. ಹೀಗೆ ಐದು ಶಕ್ತಿಗಳಿಂದಲೂ ಐದು ಕೃತ್ಯಗಳಿಂದಲೂ ವಿಶ್ವಾತ್ಮಕನಾಗಿಯೂ ಚಿದಾನಂದೈಕ ಘನನಾಗಿಯೂ ಅನುತ್ತರ ವಿಮರ್ಶಮಯನಾಗಿಯೂ ಸ್ವತಂತ್ರನಾಗಿಯೂ ಪರಿಪೂರ್ಣನಾಗಿಯೂ ಪರಮ ಶಿವನು ಇದ್ದಾನೆ.

ಸೃಷ್ಟಿ ಸಂಹಾರ ಕರ್ತಾರಂ ವಿಲಯಸ್ಥಿತಿ ಕಾರಕಂ ।
ಅನುಗ್ರಹಕರಂ ದೇವಂ ಪ್ರಣತಾರ್ತಿ ವಿನಾಶನಂ ॥

(ಮುಂದುವರಿಯುವುದು)

---

❀ ಪ್ರಕಾಶರೂಪತಾ ಚಿಚ್ಛಕ್ತಿಃ — ತಂತ್ರಸಾರ.
ಸ್ವಾತಂತ್ರ್ಯಂ ಆನಂದ ಶಕ್ತಿಃ — ತಂತ್ರಸಾರ.
ತಚ್ಚಮತ್ಕಾರ ಇಚ್ಛಾ ಶಕ್ತಿಃ — ತಂತ್ರಸಾರ
ಆಮರ್ಷಾತ್ಮಕತಾ ಜ್ಞಾನ ಶಕ್ತಿಃ — ತಂತ್ರಸಾರ
ಸರ್ವಾಕಾರಯೋಗಿತ್ವಂ ಕ್ರಿಯಾಶಕ್ತಿ — ಅನಾಮಕ

( ಸಣ್ಣ ಕಥೆ )

# ಅಪೂರ್ವ ಸಂದರ್ಶನ !

—ಎನ್. ಎಸ್. ಗದಗಕ

ಸುಮಾರು ಇಪ್ಪತ್ತಾರು ವರ್ಷಗಳ ಹಿಂದೆ ನನಗೆ ವಿಲಕ್ಷಣ ಅನುಭವ ಉಂಟಾಯಿತು. ಇಂದಿಗೂ ಅದರ ರಹಸ್ಯ ನನಗೆ ಹೊಳೆಯದಾಗಿದೆ.

ನಾನು ಇಲ್ಲಿ ವಿವರಿಸುವದೆಲ್ಲ ಪೂರ್ವ ಸತ್ಯ. ಆ ದೃಶ್ಯಗಳ ಚಿತ್ರಣ ಕೂಡ ಹಾಗೆಯೇ. ಬಹುಶಃ ಆ ಸಮಗ್ರ ಚಿಕ್ಕ ಪುಟ್ಟ ಸಂಗತಿಗಳೆಲ್ಲ ನನಗೆ ಹೇಗ ನೆನಪು ಉಳಿದವೆಂದು ನೀವು ಸಹಜವಾಗಿ ಪ್ರಶ್ನಿಸಲು ಸಾಕು. ಆದರೆ ನನ್ನ ಜೀವದ ಗೆಳೆಯರಿಗೆಲ್ಲ ಹಲವಾರುಬಾರಿ ಹೇಳಿ ಹೇಳಿ ಆ ವೃತ್ತಾಂತವೆಲ್ಲ ಅಚ್ಚೊತ್ತಿದಂತೆ ನನ್ನ ಸ್ಮೃತಿಪಟಲದ ಮೇಲೆ ಸ್ಪಷ್ಟವಾಗಿ ಮೂಡಿದೆ.

ದೆಹಲಿಯ ಕ್ವೀನ್ ರೋಡಿನ ಮೇಲಿನ ಕಾರೋನೇಶನ್ ಹೋಟೆಲಿನಲ್ಲಿ ನಡೆದ ಘಟನೆ ಇದು. ಇದಕ್ಕೂ ಮೊದಲು ನಡೆದ ಸಂಗತಿಗಳನ್ನು ನಾನು ಹಿನ್ನೆಲೆಯಾಗಿ ತಿಳಿಸಿದಲ್ಲಿ ಈ ಕತೆಯ ಅಂಶ ತಮಗೆ ಮನನೀಯ ಅನಿಸಬಹುದು.

ಅದು ಉತ್ಸವದ ದಿನ. ಮಕ್ಕಳೆಲ್ಲ ಸರಸ್ವತಿಯ ಪ್ರತಿಮೆಯನ್ನು ವಿಜೃಂಭಣೆಯಿಂದ ಪೂಜಿಸಿ ನದಿಗೆ ಕಳಿಸುವ ದಿನ. ಆಗಿನ ಉತ್ಸುಕತೆಗೆ ಸೀಮೆಯೇ ಇರಲಿಲ್ಲ! ನಾವು ಆಗ ಕಲಕತ್ತೆಯ ಚತರ್ಜಿ ಬೀದಿಯ ಹಳೆಯ ಮನೆಯಲ್ಲಿ ಇರುತ್ತಿದ್ದೆವು. ಅಂದು ಸಂಜೆಯ ಹೊತ್ತಿನಲ್ಲಿ ಮನೆಯ ಹಿಂದಿನ ಹೂದೋಟದಲ್ಲಿ ಬ್ಯಾಡ್ಮಿಂಟನ್ ಆಡುತ್ತಿದ್ದೆವು. ನಮ್ಮ ಕಿರು ಸೋದರ ಆಟವನ್ನು ನಿರೀಕ್ಷಿಸುತ್ತ ಅಲ್ಲಿಯೇ ಅಲೆದಾಡುತ್ತಿದ್ದ. ವಿಶೇಷವಾಗಿ ನನ್ನಲ್ಲಿಯೆ ಅವನ ದಿಟ್ಟಿ ನೆಲಸಿದಂತಾಯಿತು. ಅವನ ಮೊಗವೆಲ್ಲ ಏಕೋ ವ್ಯಗ್ರವಾದಂತಿತ್ತು. ಏನೋ ಒಂದು ವಿಚಾರ ಅವನನ್ನು ಗಾಸಿ ಮಾಡಿದಂತೆ ಭಾಸವಾಗುತ್ತಿತ್ತು. ಎರಡು ಮೂರು ಸಲ ಯಾವುದೋ ಒಂದು ವಿಷಯದ ಪ್ರಸ್ತಾಪ ನನ್ನೆದುರು ತೆಗೆಯಬೇಕೆಂದು ಉತ್ಕಟೇಚ್ಛೆ ಇದ್ದಿರಬೇಕು. ಹಾಗೆ ಅನುಮಾನದ ಕಾಟಾಟ ಬೇರೆ !

ನಮ್ಮ ಆಟ ಸಮಾಪ್ತವಾದೊಡನೆ ಅವನು ನನ್ನೊಬ್ಬನನ್ನೇ ಬೇರೆಯಾಗಿ ಕರೆದು ಗದ್ಗದಿತ ಕಂಠದಲ್ಲಿ ಕೇಳಿದ "ಅಣ್ಣಾ ನೋಡು ಅಕಸ್ಮಾತ್ತಾಗಿ ನಾನು ಸತ್ತೆನೆಂದು ತಿಳಿ, ನೀನು ನನ್ನ ಹೆಂಡಿರು ಮಕ್ಕಳ ಯೋಗಕ್ಷೇಮ ನೋಡಿಕೊಳ್ಳುವಿಯೊ ಹೇಗೆ? "

ಈ ಬಗೆಯ ಅವನ ವಿಚಾರ ಸರಣಿಯಿಂದ ನಾನು ಅಪ್ರತಿಭನಾದೆ. ಹಾಗೆಯೇ ಬಿರುಸಾಗಿ ಉತ್ತರಿಸಿ ಬಿಟ್ಟೆ.... "ಇಷ್ಟೇಕೆ ತಲೆ ಕೆಡಿಸಿಕೊಂಡಿರುವಿ ! ಏನು ಹುಚ್ಚು ವಿಚಾರ ನಿನ್ನದು ! ಅಕಸ್ಮಾತ್ತಾಗಿ ನೀನು ಸಾಯುವುದೇಕೆ ? ನಾನು ನಿನ್ನ ಕುಟುಂಬ ನೋಡಿಕೊಳ್ಳುವುದೆಂದರೇನು ? "

ಕಡ್ಡಿ ಮುರಿದಂತಹ ನನ್ನ ಉತ್ತರ ಕೇಳಿ ನನ್ನ ಸಹೋದರ ಕ್ಷಣಕಾಲ ನೀರವವಾಗಿದ್ದು ಮತ್ತೆ ಕೇಳಿದ– "ಅಣ್ಣಾ ಇಷ್ಟೇಕೆ ಸಿಟ್ಟು ? ಜೀವನ ಮರಣ ಗಳ ಬಗೆಗೆ ಯಾರಿಗೆ ಸುನಿಶ್ಚಿತ ಅರಿವು ಇರಲು ಸಾಧ್ಯ ? ಅದರೂ ಅಕಸ್ಮಾತ್ತಾಗಿ ನಾನು ತೀರಿಹೋದರೆ ನೀನು ನನ್ನ ಕುಟುಂಬದ ಕಾಳಜಿ ವಹಿಸುವೆಯೋ ಹೇಗೆ ?"

ನಾನು ಸಿಟ್ಟಿನ ಏರುಧ್ವನಿಯಲ್ಲಿಯೇ ಮರುನುಡಿದೆ—, "ಇಲ್ಲ ಅದೆಂದಿಗೂ ಸಾಧ್ಯವಿಲ್ಲ. ನಿನ್ನಂಥ ಎಬಡನೊಡನೆ ನನಗೆ ಮಾತು ಬೆಳೆಸುವ ಹವ್ಯಾಸ ಇಲ್ಲ." ಆ ಸ್ಥಳ ಬಿಟ್ಟು ಕದಲಿದೆ.

ನನ್ನ ತಮ್ಮನಿಗೆ ಹೀಗೆ ಉತ್ತರಿಸಿ ಅವನ ಮನೋದೌರ್ಬಲ್ಯ ಹೋಗಲಾಡಿಸಿದೆ. ಎಂದು ನಾನು ಸಮಾಧಾನ ಪಟ್ಟುಕೊಂಡೆ. ಅಯ್ಯೋ ! ಅದರೇನು ? ನನ್ನ ಜೀವನ ದುದ್ದಕ್ಕೂ ಒಂದು ಆಘಾತವನ್ನು ಸಹಿಸಬೇಕಾಗುವುದೆಂಬ ಕಲ್ಪನೆಯೇ ನನಗಂದು ಮಿಂಚಲಿಲ್ಲ.

ಇರುಳು ಬಹಳ ತಡವಾಗಿ ಸರಸ್ವತಿ ಪ್ರತಿಮೆಯನ್ನು ನಾವು ನದಿಗೆ ಕಳಿಸಿ ಬಂದಾಗ ನಾನು ಬಿಮ್ಮನೆ ದಣಿದಿದ್ದೆ. ಅವಸರ ಅವಸರವಾಗಿ ಊಟದ ಶಾಸ್ತ್ರ ತೀರಿಸಿ ನಾನು ಅದೇ ಒರಗಿದ್ದೆ. ಅಷ್ಟರಲ್ಲಿ ಪಟಪಟ ಬಾಗಿಲುಬಡಿದ ಸದ್ದು ಕೇಳಿ ಸಿತು. ಹೊರಗೆ ಬಂದಾಗ ನನ್ನ ಸಹೋದರನಿಗೆ ತೀಕ್ಷ್ಣ ಕಾಯಿಲೆಯಾಗಿ ಉಸಿರಾಟ ಅನಿಯಮಿತವಾಗಿತ್ತೆಂದು ತಿಳಿದು ಬಂದಿತು. ನಾನು ಕೊಠಡಿಗೆ ಹೋದಾಗ ಅವ ಹೊಟ್ಟೆನೋವಿನಿಂದ ಹೊರಳಾಡುತ್ತಿದ್ದ. ನನ್ನನ್ನು ಕಂಡೊಡನೆ ಅವ ಚೀರಿದ—, "ಡಾಕ್ಟರೆ, ಡಾಕ್ಟರೆ ಈ ನೋವು ತಾಳಲಾರೆ."

ಡಾಕ್ಟರರು ಕ್ಷಿಪ್ರದಲ್ಲಿಯೇ ಬಂದು ಮಾರ್ಫಿಯಾ ಡ್ರೋಸೊಂದನ್ನು ಕೊಟ್ಟರು. ಅಗಲೂ ಕೂಡ ನಾನು ಅವನೆದುರು ನನ್ನ ಹೃದಯಾಂತರಾಳದ ವಾತ್ಸಲ್ಯವನ್ನು ತೋಡಿಕೊಳ್ಳಲಿಲ್ಲ. ಮುಂದಿನ ಅನರ್ಥದ ಕಲ್ಪನೆ ಬರದಾಯಿತು.

ಇಂಜಕ್ಷ್ಯನ್ನಿನ ನಂತರ ನನ್ನ ತಮ್ಮ ಉದ್ಗಾರ ತೆಗೆದ— "ಹಾ ! ಈಗ ಹಾಯೆನಿಸುವದು" ಅನಂತರ ಗಾಢ ನಿದ್ರೆ ಆವರಿಸಿತು.

ಮರುದಿನ ಮುಂಜಾವು ಎದ್ದೊಡನೆ ನಾನು ಅವನ ಯೋಗಕ್ಷೇಮ ಕೇಳಿದೆ ಈಗಲೂ ಅವ ನಿದ್ರೆಯ ತಂದ್ರಿಯಲ್ಲಿದ್ದ. ಇದೆಲ್ಲ ಬಹುಶಃ ಮಾರ್ಫಿಯಾದ ಪ್ರಭಾವ ಎಂದು ನಾವು ಹೆಚ್ಚು ಚಿಂತೆಗೊಳಗಾಗಲಿಲ್ಲ, ಆದರೆ ಸಂಜೆಯಾಗುತ್ತ ಬಂದಂತೆ

ನಿದ್ರೆಯು ಗುಂಗು ಸರಿಯಲಿಲ್ಲ. ಮತ್ತೆ ಡಾಕ್ಟರರನ್ನು ಕರೆಯಿಸಿದೆವು, ಈಗೇನು ಅವರಿಂದ ಏನೂ ಆಗುವಂತಿರಲಿಲ್ಲ. ನನ್ನ ಪ್ರೀತಿಯ ಸೋದರ ಇಷ್ಟರಲ್ಲಿ ಮರಳಿ ಬಾರದ ಲೋಕಕ್ಕೆ ನಿರ್ಗಮಿಸಿದ್ದ !

ಅವನ ಮರಣಕ್ಕಿಂತ ನನ್ನ ಜೀವನ ಹಿಂಡಿದ ಒಂದೇ ಒಂದು ಸಮಸ್ಯೆ ಯೆಂದರೆ— "ನಾನೇ ಅವನಿಗೆ ಬ್ಯಾಡ್ಮಿಂಟನ್ ಕೋರ್ಟಿನಲ್ಲಿ ಸಮಾಧಾನ ಏಕೆ ಹೇಳಲಿಲ್ಲ ಎಂಬುದು. ಹಾಗೆ ಮಾಡಿದ್ದರೆ ಬಹುಶಃ ಅವನಿಗೆ ಹೃದಯಾಘಾತ ಆಗುತ್ತಿರಲಿಲ್ಲವೇನೋ ! ಖಾಯಿಲೆ ಕೂಡ ಉಲ್ಬಣಾವಸ್ಥೆ ಮುಟ್ಟುತ್ತಿರಲಿಲ್ಲವೇನೋ ! ಅಂತೂ ನಾನೇ ತಪ್ಪಿತಸ್ಥ ಎನಿಸಿತು. ಈಗ ಮನಸ್ಸು ಪಶ್ಚಾತ್ತಾಪದಿಂದ ರೋಸಿ ಹೋಯ್ತು.

ಕೆಲ ದಿನಗಳ ನಂತರ ನನಗೆ ಒಂದು ಕೆಲಸಕ್ಕೆಂದು ಮರಳಿ ದೆಹಲಿಗೆ ಹೋಗಬೇಕಾಯಿತು. ಸಂಜೆಯ ವೇಳೆಗೆ ನಾನು ರಾಜಧಾನಿಗೆ ತಲುಪಿದೆ. ಕಾರೊನೇಶನ್ ಹೋಟೆಲಿನಲ್ಲಿ ಉಳಿದು, ತುಂತುರ ಹನಿ ನೀರಿನಿಂದ ಸ್ನಾನಮಾಡಿ ಉತ್ತೇಜನಗೊಂಡೆ. ಊಟವನ್ನು ಕೊಠಡಿಗೇ ತಾರೆಂದು ಆಳಿಗೆ ತಿಳಿಸಿ, ಅದು ಇನ್ನೂ ತಡವಿದ್ದುದರಿಂದ ಪುಸ್ತಕ ಹಿಡಿದುಕೊಂಡು ವಿರಾಮಕ್ಕಾಗಿ ಹಾಸಿಗೆಯಲ್ಲೊರಗಿದೆ.

ಮುಂದೆ ಸ್ವಲ್ಪ ವೇಳೆಯಲ್ಲಿ ನನ್ನ ದೇಹ ಗಾಳಿಯೋಪಾದಿಯಲ್ಲಿ ಅತಿ ಹಗುರಾಗಿ ಸ್ಥಳಾಂತರ ಹೊಂದುವಂತೆ ಭಾಸವಾಯ್ತು. ಅಂತೂ ಹಾಸಿಗೆ ಬಿಟ್ಟು ಹೊರಹೊರಟೆನೆನಿಸಿತು. ಕಿಟಕಿಯಿಂದ ಹಾಯ್ದು ಮೇಲೆ ಮೇಲೆ ಹಾಗೆಯೇ ಹೊರಹೊರಟೆ. ಅಲ್ಲಿ ಅಸಹಜತೆಗೆ ಏನೂ ಎಡೆ ಇರಲಿಲ್ಲ, ಎಲ್ಲವೂ ಲೀಲಾಜಾಲವಾಗಿ ಸಂಭವಿಸಿತು.

ಕೆಲವೊಂದು ಅಂತರ ಕ್ರಮಿಸಿದ ಮೇಲೆ ನಾನು ಹೊರಡುವಾಗ ಪ್ರಕಾಶ ಕಡಿಮೆ ಆಯಿತು. ಅನಂತರ ಕತ್ತಲೆಯ ಸಾಮ್ರಾಜ್ಯದಲ್ಲಿ ನುಸುಳಿದೆ, ಯಾವ ದಿಕ್ಕಿನಲ್ಲಿ ಹೊರಟಿರುವೆ ? ತಲುಪುವದೆಲ್ಲಿಗೆ ? ಒಂದೂ ಹೊಳೆಯಲಿಲ್ಲ.

ಕ್ರಮೇಣ ಪ್ರಶಾಂತ ಬೆಳ್ದಿಂಗಳಲ್ಲಿ ಕಾಣುವಂತೆ ಒಂದೊಂದು ವಸ್ತು ಮಸುಮಸುಕಾಗಿ ಗೋಚರಿಸತೊಡಗಿದವು. ಮುಂದೆ ಆಗಸದಲ್ಲಿ ತಾರೆಗಳು ಮಿನುಗುವುದನ್ನು ಕಂಡೆ, ಅಂದು ಪೂರ್ಣಿಮೆಯೆಂದು ನಿಚ್ಚಳವಾಗಿ ತಿಳಿಯಿತು. ಮನೋಹರವಾದ ವನ ಪ್ರದೇಶದಲ್ಲಿ ನಾನು ಅಲೆದಾಡುತ್ತಿರುವೆನೆಂದು ಎನಿಸಿತು. ಅಪಾರ ಬಟ್ಟಬಯಲು, ನದಿ, ಗಿರಿ, ಕಂದರಗಳಲ್ಲಿ ಹಾಯ್ದಂತೆ ಬೆಳ್ದಿಂಗಳು ಹಿಟ್ಟು ಚೆಲ್ಲಿದಂತೆ ಕಂಡಿತು. ವಿಧ ವಿಧ ಸುಮಗಳ ಸೌರಭದ ಕಲ್ಪನೆ ಬಂದಿತು. ಅದೆಲ್ಲ ಅವರ್ಣನೀಯ ಸೌಂದರ್ಯ, ಸ್ವರ್ಗೀಯ ವಾತಾವರಣ. ಆದರೆ ಅತಿ ನಿರ್ಜನ, ನೀರವ!

ಮುಂದೆ ಕ್ರಮಿಸಿದಾಗ ಬಯಲಲ್ಲಿ ಬಿಳಿ ಮಹಲೊಂದು ಕಣ್ಣಿಗೆ ಬಿದ್ದಿತು. ಬಳಿ ಲ್ಲಿ ಬೇರೆ ಕಟ್ಟಡ ಇರಲಿಲ್ಲ. ಹಳ್ಳಿಗಾಡಿನ ಸುಳಿವೂ ಇಲ್ಲ, ಅದು ಉತ್ತುಂಗ ಕಟ್ಟಡ. ುರು ಬಿಸಿಲು ಮೆಟ್ಟಿ !, ಏರಿ ಹೋಗಲು ಸೋಪಾನ ಮಾರ್ಗ. ನಾನು ತೇಲುತ್ತ ಸ್ಥಳ ತಲುಪಿದೆ. ಎಲ್ಲೆಡೆ ಹಾಲು ಬೆಳ್ದಿಂಗಳು, ಒಂದು ಕೊಠಡಿಯನ್ನು ಮಾತ್ರ ಗಳು ಆವರಿಸಿದ್ದಿತು. ಒಮ್ಮಿಂದೊಮ್ಮೆಲೆ ಅಲ್ಲಿ ನನ್ನ ಸೋದರ ಕಣ್ಣಿಗೆ ಬಿದ್ದ ೋಡೆಗೆ ಒರಗು ನಿಂತಿದ್ದ !

ಅವನನ್ನು ಕಂಡೊಡನೆ ಒಂದೇ ವಿಚಾರ ನನ್ನ ಮನದಲ್ಲಿ ಮೂಡಿತು. ಇನ್ನೇನು ಇವನು ಸಿಕ್ಕನಲ್ಲ ನನ್ನ ಇಂಗಿತ ಅರುಹಿಬಿಟ್ಟರಾಯಿತು" ಎಂದುಕೊಂಡೆ. ವನ ಬಳಿಗೆ ಹೋಗಿ ನುಡಿದೆ "ತಮ್ಮಾ, ನಾನು ಹಿಂದಕ್ಕೆ ನಿನಗೆ ಹೇಳಿದ್ದು ಸುಳ್ಳು, ನ್ನ ಮಕ್ಕಳನ್ನು, ಹೆಂಡತಿಯನ್ನು ತಪ್ಪದೆ ನೋಡಿಕೊಳ್ಳುವೆ, ಚಿಂತೆ ಬೇಡ. ನನ್ನ ಮ್ಮ ಆಗ ಮುಗುಳು ನಗೆ ನಕ್ಕು ನುಡಿದ—"ಅಣ್ಣಾ ನನಗೆ ನಿನ್ನ ವಿವೇಕಿ ಹೃದಯ ಾತ್ತಿಲ್ಲವೆ?" ಎಂತಹ ಮಧುರ, ಹೃದಯ ವಿದ್ರಾವಕ ನುಡಿ ಅದು !

ತಕ್ಷಣ ಅವನು ಉದ್ವಿಗ್ನನಾಗಿ ನುಡಿದ—"ಅಣ್ಣಾ, ಹಿಂತಿರುಗು, ಇಲ್ಲಿ ನೀನು ಣ ಕೂಡ ನಿಲ್ಲಲಾಗದು."

ಇಷ್ಟು ಅವನು ಉಸುರುವಾಗ ನಾನು ತಿರುಗಿ ಹೊರಟಂತೆ ಎನಿಸಿತು. ನನ್ನ ಾಯಿಯಿಂದ ಒಂದು ಶಬ್ದ ಕೂಡ ಹೊರಹೊಮ್ಮಲಿಲ್ಲ. ಕೇವಲ ಗಾಳಿಯಂತೆ ಸಾಗಿದೆ ರುಗಿ ಹೊರಟಾಗಲೂ ಅದೇ ಹಿಂದಿನ ಮಾರ್ಗ. ಅದೇ ದೃಶ್ಯ, ನೆರಳು, ಬೆಳಕು ! ುನಃ ಕಿಟಕಿಯೊಳಗಿಂದ ಹಾಯ್ದು ಹೊಟೆಲ್ಲಿನ ಹಾಸಿಗೆಯ ಮೇಲ್ಲಿಯೆ !

ಇದೀಗ ಒರಗಿರುವೆ ಎಂಬ ಭ್ರಮೆ ಉಂಟಾಗುವಾಗ ಹೊಟೆಲ್ಲಿನ ಹುಡುಗ ೇಳಿದ "ಸ್ವಾಮಿ, ಊಟ ಬಡಿಸಿ ತಂದಿರುವೆ"

(ಆಧರಿಸಿದುದು)

---

ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯ ಫ್ರೀ ಬೋರ್ಡಿಂಗ್ ೆಂಗಳೂರು ಸಂಸ್ಥೆಯ ಉಚಿತ ವಿದ್ಯಾರ್ಥಿನಿಲಯಕ್ಕೆ ಸಂಸ್ಕೃತ—ವೇದ ಭ್ಯಾಸ ಮಾಡಲು ಇಚ್ಛೆಯುಳ್ಳ ವೀರಶೈವ ವಿದ್ಯಾರ್ಥಿಗಳು ತಾರೀಖು 5-6-1981 ರ ಒಳಗಾಗಿ ಸಂಸ್ಥೆಯಿಂದ ಅರ್ಜಿಯನ್ನು ಪಡೆದು ಸಕಾಲಕ್ಕೆ ಕಳುಹಿಸಿಕೊಡಬೇಕಾಗಿ ಈ ಮೂಲಕ ತಿಳಿಯಪಡಿಸಿರುತ್ತೆ.

ಕಾರ್ಯದರ್ಶಿ
ಶ್ರೀ ಮಹಂತರ ಮಠ.

# ಜಗಜ್ಯೋತಿ ಬಸವಣ್ಣನವರು

—ಗೊ. ರು. ಚನ್ನಬ

ವ್ಯಕ್ತಿಯ ಬೆಲೆ ಅವನ ಚಾರಿತ್ರ್ಯವನ್ನು ಅವಲಂಬಿಸುತ್ತದೆ. ಚಾರಿತ್ರ್ಯ ಬ
ವುಳ್ಳ ವ್ಯಕ್ತಿಯಲ್ಲಿ ಒಂದು ಅಂತಃಸ್ಫೂರ್ತಿಯ ಶಕ್ತಿಯಿರುತ್ತದೆ. ಅದನ್ನೇ ನಾವು ಅಂ
ರಂಗದ 'ಜ್ಯೋತಿ' ಎನ್ನುತ್ತೇವೆ. ಸಂಸ್ಕೃತದಲ್ಲಿ ಅದಕ್ಕೆ 'ತೇಜಸ್ಸು' ಎನ್ನುವುದು
ಮುಸಲ್ಮಾನರು 'ನೂರ್' ಎನ್ನುತ್ತಾರೆ. ಪಾಶ್ಚಿಮಾತ್ಯ ವಿದ್ವಾಂಸರು 'Human
Electricity' ಎಂದು ಮುಂತಾಗಿ ಕರೆಯುತ್ತಾರೆ. ಯಾವ ವ್ಯಕ್ತಿಯಲ್ಲಿ ಅ
ಜೀವನ ಜ್ಯೋತಿ ಪ್ರಜ್ವಲಿಸುತ್ತಿರುತ್ತದೋ ಅಂತಹವನು ಮಹಾನ್ ವ್ಯಕ್ತಿಯೆನಿಸ
ತ್ತಾನೆ. ಅವನ ಪ್ರತಿಭೆ ಜಗತ್ತನ್ನೇ ಮುಗ್ಧಗೊಳಿಸುತ್ತದೆ. ಸಂಸಾರ ಅವನ ಚರಣಕ್ಕೆ
ಶಿರವಾಗಿ ನಮಸ್ಕರಿಸುತ್ತದೆ.

ಹನ್ನೆರಡನೆಯ ಶತಮಾನದಲ್ಲಿ ಆಗಿ ಹೋದ ಬಸವಣ್ಣನವರು ಅಂತಹ ಒಂದು
ಮಾನವ ಜ್ಯೋತಿ; ಮಹಾಜ್ಯೋತಿ. ಅವರ ಜೀವನಾದರ್ಶ ಮತ್ತು ವ್ಯಕ್ತಿತ್ವ ವಿಶ್ವದ
ಇತಿಹಾಸದಲ್ಲಿ ಅಪರೂಪ. ಧಾರ್ಮಿಕ ಕ್ಷೇತ್ರದಲ್ಲಿ ಸ್ಮರಣೀಯ ಸೇವೆ ಸಲ್ಲಿಸಿದವರಿ
ಬಹುದು; ಆಧ್ಯಾತ್ಮಿಕ ಸಾಧನೆಯಲ್ಲಿ ಅದ್ಭುತರೆನಿಸಿಕೊಂಡವರಿರಬಹುದು; ಆಡಳಿತ
ರಂಗದಲ್ಲಿ ಆದರ್ಶರಾದವರಿರಬಹುದು; ಸಾಮಾಜಿಕ ಸುಧಾರಣೆಯಲ್ಲಿ ಹೆಸರಾದವರು
ಹಾಗೂ ಆರ್ಥಿಕ ರಂಗದ ತಜ್ಞರು ಇರಬಹುದು; ಸಾಹಿತ್ಯ ಕಣಜಕ್ಕೆ ಬೃಹತ್ ಕಾಣಿಕೆ
ಸಲ್ಲಿಸಿದವರೂ ಇರಬಹುದು. ಆದರೆ ಇವೆಲ್ಲ ಕ್ಷೇತ್ರಗಳಲ್ಲೂ ಅಭೂತಪೂರ್ವ ಕ್ರಾಂತಿ
ಯನ್ನುಂಟು ಮಾಡಿದ ವಿಶಿಷ್ಟ ವ್ಯಕ್ತಿ ಬಸವಣ್ಣನವರು. ಆದುದರಿಂದಲೇ, ಅವರು
ಓರ್ವ ಯುಗಪುರುಷ; ವಿಶ್ವವಿಭೂತಿ ಪುರುಷ. ಬಸವಣ್ಣನವರು ಕೇವಲ ಬಾನಿನಲ್ಲಿ
ಮಿನುಗುವ ತಾರೆಯಲ್ಲ; ಉಜ್ವಲ ಕಿರಣಪ್ರಕಾಶದ ಸೂರ್ಯ.

ಬಸವಣ್ಣನವರ ಬಗೆಗೆ ಈ ಮಾತುಗಳನ್ನು ಹೇಳಲಿಕ್ಕೆ ಸಾಕಷ್ಟು ಕಾರಣವಿದೆ.
ಇಲ್ಲಿ ಅತಿಶಯೋಕ್ತಿಗಾಗಲೀ, ಅಂಧಾಭಿಮಾನಕ್ಕಾಗಲೀ ಅವಕಾಶವಿಲ್ಲ. ಅವರ ಯುಗ
ಪುರುಷತ್ವಕ್ಕೆ, ವಿಭೂತಿ ಪುರುಷತ್ವಕ್ಕೆ, ವಿಶ್ವ ಮಾನವತ್ವಕ್ಕೆ ಅವರ ಬದುಕೇ ಸಾಕ್ಷಿ
ಯಾಗಿದೆ. ಅವರ ಒಂದೊಂದು ಸಾಧನೆಯತ್ತ ನಾವು ನೋಡಿದರೆ ಅವರ ಮಹಾನ್
ವ್ಯಕ್ತಿತ್ವದ ದರ್ಶನ ನಮಗಾಗುತ್ತದೆ.

ಈ ಸಂದರ್ಭದಲ್ಲಿ ಒಂದು ಮಾತು ಹೇಳಬೇಕಾಗುತ್ತದೆ. ಮಹಾತ್ಮರನ್ನು
ನೋಡುವಾಗ, ಅವರ ಬಗ್ಗೆ ತಿಳಿದುಕೊಳ್ಳುವಾಗ, ಯಾವುದೇ ಪೂರ್ವಗ್ರಹ ಪೀಡೆ

ಅಂತಃಕರಣದು; ಜಾತಿ ಪ್ರಾಂತ್ಯಗಳ ಸಂಕುಚಿತ ಪರಿಸರದ ಎಲ್ಲೆಯನ್ನು ದಾಟಿದ ವಿಶಾಲ ದೃಷ್ಟಿಯಿರಬೇಕು: ವಾಸ್ತವತೆಯನ್ನು ಅರ್ಥಮಾಡಿಕೊಳ್ಳುವ ಜೀವನ ಪ್ರಜ್ಞೆಯಿರಬೇಕು. ಇಲ್ಲವಾದರೆ ಸತ್ಯದ ದರ್ಶನವಾಗುವುದಿಲ್ಲ. ಬಸವಣ್ಣನವರ ಬದುಕನ್ನು ನೋಡಬೇಕಾದರೂ ಇಂತಹ ಶುದ್ಧ ದೃಷ್ಟಿ ಅಗತ್ಯ. ಏಕೆಂದರೆ, ಅವರು ಯಾವುದೇ ಒಂದು ಜಾತಿಗೆ, ಪ್ರಾಂತ್ಯಕ್ಕೆ, ಕಾಲಕ್ಕೆ ಸೇರಿದವರಲ್ಲ; ಅವರು ವಿಶ್ವಮಾನವ; ವಿಶ್ವ ಕುಟುಂಬಿ, ಅವರ ಸಂದೇಶ ಸಾರ್ವಜನಿಕ ಮತ್ತು ಸಾರ್ವಕಾಲಿಕ.

ಬಸವಣ್ಣನವರು ವ್ಯಷ್ಟಿ ಸಮಷ್ಟಿಗಳೆರಡರ ಸಮನ್ವಯ ಸೂತ್ರ; ಆಚಾರ-ವಿಚಾರಗಳ ಸಾಕಾರರೂಪ, ಪರಮಾರ್ಥ-ಲೌಕಿಕಗಳೆರಡನ್ನೂ ಅಳವಡಿಸಿಕೊಂಡ ಯೋಗಜೀವಿ: ಪರಮಾನುಭಾವಿ. ಅವರ ಮಹೋನ್ನತ ಜೀವನ ವಿಶ್ವಕ್ಕೆ ನೀಡಿದ ಸಂದೇಶವೇನೆಂಬುದನ್ನು ನಾವು ವಿಚಾರಿಸುವುದು ಅಗತ್ಯ.

ಮನುಷ್ಯ ಏನೆಲ್ಲ ಭೋಗ ಭಾಗ್ಯಗಳನ್ನು ಪಡೆದಿದ್ದರೂ ಆವುದೋ ಅವ್ಯಕ್ತವಾದ ಚಡಪಡಿಕೆ ಅವನನ್ನು ಕಾಡುತ್ತದೆ. ಅವರ್ಣನೀಯವಾದ ಅನುಭವವೊಂದನ್ನು, ಸಮೃದ್ಧಿಯನ್ನು ಕಾಣಬೇಕೆಂದು ಆತ ತವಕಿಸುತ್ತಾನೆ. ಇಂತಹ ತವಕ ಸಂಸ್ಕಾರ ಜೀವಿಗಳಲ್ಲಿ ವಿಶೇಷವಾಗಿ ಕಾಣಬರುತ್ತದೆ. ಆ ಅವರ್ಣನೀಯ ಅನುಭವವೇ ಬಸವಣ್ಣನವರ ಮಾತಿನಲ್ಲಿ “ಅನುಭಾವ”. ಅದು ಕಾಣಲಾರದ, ಕೇಳಲಾಗದ, ಹೇಳಲಾಗದ ದಿವ್ಯಸಂಪತ್ತು. ಅದೇ ಆತ್ಮ ಸಾಕ್ಷಾತ್ಕಾರ: ಸ್ವಾನುಭಾವ.

### ಆಧ್ಯಾತ್ಮಿಕ ಸಾಧನೆ

ವ್ಯಕ್ತಿಯಲ್ಲಿ ಶ್ರದ್ಧಾ-ಭಕ್ತಿಗಳು ಮೂಡುದ ಹೊರತು ‘ಸ್ವಾನುಭಾವ’ ಮುಟ್ಟಲಾಗದ ಗುರಿಯಾಗುತ್ತದೆ. ತನ್ನನ್ನು ಬಿಟ್ಟು ಉಳಿದೆಲ್ಲವನ್ನೂ ಅರಿತುಕೊಳ್ಳುವುದಕ್ಕಿಂತ ತನ್ನನ್ನು ತಾನು ಅರಿತುಕೊಳ್ಳುವುದು ಮಹತ್ವದ ವಿಷಯ. ಬಸವಣ್ಣನವರೇ ಹೇಳುವಂತೆ—

“ಏನಾದರೆಯೂ ಸಾಧಿಸಬಹುದು ;
ಮತ್ತೇನನಾದರೆಯೂ ಸಾಧಿಸಬಹುದಯ್ಯ
ತಾನಾರೆಂಬುದ ಸಾಧಿಸಬಾರದು
ಕೂಡಲ ಸಂಗಮ ದೇವರ ಕರುಣವುಳ್ಳವಂಗಲ್ಲದೆ”.

ಈ ತನ್ನ ತಾನರಿವ ಸಾಧನೆಗೆ ದೈವ ಕರುಣೆ ಬೇಕೆನ್ನುತ್ತಾರೆ ಬಸವಣ್ಣನವರು. ದೈವ ಕರುಣೆ ಸುಮ್ಮನೆ ದೊರಕುವ ಹೊರಗಿನ ವಸ್ತುವಲ್ಲ. ಅದು ನಮ್ಮಲ್ಲಿಯೇ ಇರುವ ಘನವಸ್ತು. ಅದು ‘ಉದರದೊಳಗೆ ಬೈಚಿಟ್ಟ ಬಯಕೆಯ ಕಿಚ್ಚು ; ಶಶಿಯೊಳಗಣ ರಸ ರುಚಿ; ನನೆಯೊಳಗಣ ಪರಿಮಳ’. ಅದನ್ನು ಒಳಗಿಟ್ಟುಕೊಂಡು ಹೊರಗೆ ಹುಡು

ಕುವುಪೆಂದರೆ ಅಲ್ಲಮ ಪ್ರಭು ಹೇಳುವಂತೆ 'ಉತ್ತ್ತನೇರಿ ವಿತ್ತನರಸಿದಂತೆ' ಇದನ್ನೇ ಅನು ಭಾವಿ ಫ್ರಾನ್ಸಿಸ್ ಥಾಮ್ಸನ್ ಹೀಗೆ ಹೇಳುತ್ತಾನ :—

> "Does the Fish Scar to find ocean? or the eagle fly to find the air? That we ask the Stars in motion to tell us if he is there?"

ಆದುದರಿಂದ ಬಸವಣ್ಣನವರು ಆ ಮಹಾವಸ್ತುವನ್ನು ಹೊರಗಡೆ ಹುಡುಕುವ ಹುಚ್ಚಿಗೆ ಹೋಗಲಿಲ್ಲ. ತಮ್ಮಲ್ಲೇ ಕಂಡುಕೊಳ್ಳಲು ಸಾಧನೆ ನಡೆಸಿದರು : ಸಿದ್ಧಿ ಪಡೆದರು. ಬಸವಣ್ಣನವರು ಕಂಡ ಆ ನಿರಾಳದ ಅನುಭವ ಯಾವುದೇ ಒಬ್ಬ ಶರಣನಿಗಲ್ಲ ; ಒಂದು ಧರ್ಮ ಮತ ತತ್ವಕ್ಕಲ್ಲ ; ಒಂದು ಕಾಲ, ಒಂದು ದೇಶ, ಜಾತಿ ಜನಾಂಗಕ್ಕಲ್ಲ. ಅಂತಹ ಅಂತರಂಗದ ಪರಂಜ್ಯೋತಿಯ ಬೆಳಗನ್ನು ಕಂಡ ಬಸವಣ್ಣನವರು—

> "ಘನಗಂಭೀರ ಮಹಾ ಘನದೊಳಗೆ
> ಘನಕ್ಕೆ ಘನವಾಗಿದ್ದೆನಯ್ಯ
> ಕೂಡಲ ಸಂಗಮದೇವಯ್ಯನೆಂಬ
> ಮಹಾ ಬೆಳಗಿನೊಳಗೆ ಬೆಳಗಾಗಿರ್ದೆನೆಂಬ
> ಶಬ್ದಮುಗ್ಧವಾದುದನೇನೆಂಬೆನಯ್ಯ"

ಎಂದು ಹೇಳುತ್ತಾರೆ. ಹೀಗೆ ಸ್ವಯಂ ಜ್ಯೋತಿಯಾದ ಬಸವಣ್ಣನವರ ಸಂಪರ್ಕ ಪಡೆದ ಲಕ್ಷ ಲಕ್ಷ ಜನ ಭಕ್ತರು ಶರಣಜ್ಯೋತಿಗಳಾದರು. ಹನ್ನೆರಡನೆಯ ಶತಮಾನವು ಹಿಂದೆದೂ ಕಾಣದ ಅನುಭಾವ ಜ್ಯೋತಿಗಳನ್ನು ಕಂಡಿತು.

### ಧಾರ್ಮಿಕ ಸಮತೆ

ಧಾರ್ಮಿಕ ಕ್ಷೇತ್ರದಲ್ಲಿ ಬಸವಣ್ಣನವರು ಮಾಡಿದ ಕ್ರಾಂತಿ ಅದ್ವಿತೀಯ. ಅವರು ನೀಡಿದ ಶರಣ ಧರ್ಮ ಅದುವರೆಗೂ ಇದ್ದ ಪೌರಾಣಿಕ ಧರ್ಮದ ಕುಂದು ಕೊರತೆಗಳನ್ನು ಪರಿಹರಿಸಿದ ಪ್ರಗತಿಪರ ಧರ್ಮವಾಗಿತ್ತು. ಅರ್ಥವಿಲ್ಲದ ಅಂಧಶ್ರದ್ಧೆ, ಶುಷ್ಕ ಸಂಪ್ರದಾಯಗಳ ವಿರುದ್ಧ ವೈಚಾರಿಕ ಪ್ರಜ್ಞೆಯ ಧ್ವಜವನ್ನು ಎತ್ತಿ ಹಿಡಿದವರು ಬಸವಣ್ಣನವರು. ಕಾಲ-ಕಾಲದಲ್ಲಿ, ನೆಲ-ಜಲದಲ್ಲಿ, ವ್ಯಕ್ತಿ-ವ್ಯಕ್ತಿಗಳಲ್ಲಿ ಇದ್ದ ಕಾಲ್ಪನಿಕ ಸ್ಪೃಶ್ಯಾ-ಸ್ಪೃಶ್ಯತೆಗಳನ್ನು ಅವರು ತೊಡೆದು ಹಾಕಿದರು.

ಯಾವುದೇ ಒಂದು ಹೊಸ ಕಾರ್ಯ ಹಿಡಿಯುವಾಗ ಗಳಿಗೆ, ಮುಹೂರ್ತಗಳನ್ನು ನೋಡುವ ಮೂಢ ಸಂಪ್ರದಾಯವನ್ನು ಬಸವಣ್ಣನವರು ಒಪ್ಪುವುದಿಲ್ಲ. ಒದಗಿ ಬಂದ ಸಂದರ್ಭವೇ ಶುಭ ಮುಹೂರ್ತವೆನ್ನುವ ಅವರು—.

" ಎಮ್ಮವರು ಬೆಸಗೊಂಡರೆ ಶುಭ ಲಗ್ನವೆನ್ನಿರಯ್ಯ
ರಾಶಿ ಕೂಟ ಗುಣ ಸಂಬಂಧ ಉಂಟೆಂದು ಹೇಳಿರಯ್ಯ
ಚಂದ್ರಬಲ ತಾರಾಬಲ ವುಂಟೆಂದು ಹೇಳಿರಯ್ಯ
ನಾಳಿನ ದಿನಕ್ಕಿಂದಿನ ದಿನ ಲೇಸೆಂದು ಹೇಳಿರಯ್ಯ
ಕೂಡಲ ಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯ "

ಎಂದು ಹೇಳಿದ್ದಾರೆ. ಕಾಲದಲ್ಲಿ ಶುಭ–ಅಶುಭ ಎಂದರೇನು ? ಎಲ್ಲವೂ ಶಿವ ಮಯವೇ. ಸದ್ಭಾವನೆಯಿಂದ ಮಾಡುವ ಎಲ್ಲ ಕಾರ್ಯವೂ ಮಂಗಲವೇ. ಶರಣರು ಮ್ಮತಿಸಿದ ಸಂದರ್ಭವೇ ಶುಭಮುಹೂರ್ತ.

ಕಾಲ ನಿರಂತರ ಪ್ರವಾಹಿ: ಅದು ಯಾರಿಗೂ ಕಾಯುವ ಆಳಲ್ಲ. ಅದರ ಗರ್ಭ ನಂತ. ಅವತಾರ, ಅವನತಿ–ಎರಡೂ ಕಾಲಗರ್ಭದಿಂದಲೇ; ಕಾಲಗರ್ಭದಲ್ಲೇ. ಜಡ- ೀತನ ಎಲ್ಲವುಗಳ ವ್ಯವಹಾರದಲ್ಲೂ ಅದು ಮಾತ್ರ ನಿರ್ಲಿಪ್ತ; ನಿರ್ದಾಕ್ಷಿಣ್ಯ. ಸಂತ ವಿ ಉಮ್ಮರ್ ಖಯ್ಯಾಂ ಒಂದೆಡೆ—

" ಜಾಮುಷೆಡನು ಹಿಗ್ಗಿ ಮೆರೆಯುತಿದ್ದ ಕೋಟೆಯಲಿ
ಹಲ್ಲಿ ನರಿಗಳು ಮೆರೆವುವೋಲಗದೊಳಿಂದು
ಮಲಗಿ ಬೈರಾಮು ವೀರನು ನಿದ್ರಿಸುತ್ತಿದ್ದಲ್ಲಿ
ಕಾಡು ಕತ್ತೆಗಳವನ ತಲೆಯ-ತುಳಿಯುವುವು "

ಜಾಮ್ ಷೆಡನಂತಹ ಮಹಾ ಚಕ್ರವರ್ತಿ ವೈಭವದಿಂದ ಮೆರೆಯುತ್ತಿದ್ದ ೋಟೆ ಇಂದ ಹಲ್ಲಿ, ನರಿಗಳ ಆವಾಸ. ಮಹಾ ಪರಾಕ್ರಮಿ ಬೈರಾಮುಖಾನನ ಮಾಧಿಯ ಮೇಲೆ ಕಾಡು ಕತ್ತೆಗಳು ಓಡಾಡುತ್ತಿವೆ. ಇದು ಕಾಲಗತಿ. ಆದುದ ಂದ ನಮಗೆ ದೊರಕಿರುವ ಕಾಲದ ಅವಧಿಯನ್ನು ಸದುಪಯೋಗಪಡಿಸಿಕೊಳ್ಳುವ ್ರಜ್ಞೆ ನಮಗಿರಬೇಕು. ಇಲ್ಲ ಶುಭ–ಅಶುಭಗಳ ಲೆಕ್ಕ ಹಾಕುತ್ತ ಕುಳಿತುಕೊಳ್ಳ ರಷ್ಟರಲ್ಲಿ ಹೊತ್ತು ಮುಳುಗಿ ಹೋಗುತ್ತದೆ

" ಹೊತ್ತಾರೆ ಎದ್ದು ಅಗ್ಗವಣಿ ಪತ್ತರೆಯ ತಂದು
ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ
ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು
ಹೊತ್ತು ಹೋಗದ ಮುನ್ನ-ಮೃತ್ಯು ಒಯ್ಯದ ಮುನ್ನ
ತೊತ್ತು ಕೆಲಸವ ಮಾಡು ಕೂಡಲ ಸಂಗಮದೇವನ "

ಬಸವಣ್ಣನವರ ಈ ಮಾತು ಎಷ್ಟೊಂದು ಅರ್ಥಪೂರ್ಣವಾಗಿದೆ ! ಮಂಗಲ ಕಾರ್ಯಕ್ಕೆ ಮುಹೂರ್ತ ಕಾಯುವ ಮೂಢ ಸಂಪ್ರದಾಯಕ್ಕೆ ಇದು ಪ್ರಜ್ಞೆಯ ಕನ್ನಡಿಯನ್ನು ಹಿಡಿಯುತ್ತದೆ.

ಬಸವಣ್ಣನವರಿಗೆ ಮದುವೆಯೆಂದರೆ ಸಡಗರವಿಲ್ಲ. ಮರಣ ಎಂದರೆ ಸಂಕಟ ವಿಲ್ಲ. ಎರಡನ್ನೂ ಒಂದೇ ದೃಷ್ಟಿಯಿಂದ ಕಾಣುವ ಅವರಿಗೆ "ಮರಣವೇ ಮಹಾನವಮಿ"! ನಮ್ಮಲ್ಲಿ ಮದುವೆಯ ಸಂದರ್ಭದಲ್ಲಿ 'ಮರಣ' ದ ಮಾತೆತ್ತುವುದು ಅಮಂಗಳಕರವೆಂಬನಂಬಿಗೆಯಿದೆ. ಆದರೆ ಬಸವಣ್ಣನವರು 'ಮರಣ' ಕ್ಕೆ ತಗುಲಿದ ಆ ಅಮಂಗಲದ ದೋಷವನ್ನು ತೊಡೆದು ಹಾಕಿ ಅದಕ್ಕೆ 'ಮಹಾನವಮಿ' ಎಂಬ ಮಂಗಳದ ತೊಡಿಗೆ ತೊಡಿಸಿದರು. ಹೀಗೆ ಶುಭ–ಅಶುಭ, ಮಂಗಳ—ಅಮಂಗಳ ಎಲ್ಲವೂ ಮಾನವ ಕಲ್ಪಿತ ಎಂಬುದನ್ನು ಸ್ಪಷ್ಟಪಡಿಸಿದರು.

ಇನ್ನು ನೆಲ-ಜಲಗಳಲ್ಲೂ ಬೇಧವಿಲ್ಲವೆಂದು ಬಸವಣ್ಣನವರು ಸಾರಿದರು. ಇಂತಹ ನದಿಯಲ್ಲಿ ಸ್ನಾನ ಮಾಡಿದರೆ ಪುಣ್ಯ; ಇಂತಹ ಕ್ಷೇತ್ರ ದರ್ಶನ ಮಾಡಿದರೆ ಪಾವನ, ಇಂತಹ ತೀರ್ಥ ಪವಿತ್ರ–ಎನ್ನುವ ಎಲ್ಲ ನಂಬಿಕೆಗಳನ್ನೂ ಅವರು ಅಲ್ಲಗಳೆದರು. ದೇವನಿರ್ಮಿತ ನೆಲ–ಜಲಗಳಲ್ಲಿ ಮಾನವ ನಿರ್ಮಿತ ಭೇಧ–ಭಾವ ಸಲ್ಲದೆಂದರು.

ಶರಣರು ನಡೆದ ನೆಲವೇ ಪಾವನ, ಮಿಂದ ಜಲವೇ ಪವಿತ್ರ, ಎನ್ನುವ ವಿಚಾರ ವನ್ನು ಜನ ತಿಳಿದುಕೊಳ್ಳಬೇಕೆಂದರು. ದೇವಲೋಕ ಮರ್ತ್ಯಲೋಕ ಬೇರೆಲ್ಲೂ ಇರದೆ ನಾವೇ ಅವುಗಳ ಕರ್ತರು ಎಂದು ತಿಳಿಸಿದರು.

> " ದೇವಲೋಕ ಮರ್ತ್ಯ ಲೋಕವೆಂಬುದು ಬೇರೆ ಮತ್ತುಂಟೆ?
> ಈ ಲೋಕದೊಳಗೆ ಮತ್ತೆ ಅನಂತಲೋಕ
> ಶಿವಲೋಕ ಶಿವಾಚಾರವಯ್ಯ, ಭಕ್ತನಿದ್ದ ಠಾವೇ ದೇವಲೋಕ,
> ಭಕ್ತನಂಗಣವೇ ವಾರಣಾಸಿ, ಕಾಯಕವೇ ಕೈಲಾಸ,
> ಇದು ಸತ್ಯ ಕೂಡಲ ಸಂಗಮದೇವಾ"

ಎಂತಹ ಉನ್ನತ ವಿಚಾರ! ನಾವೆಲ್ಲ ವಿಶ್ವಾತ್ಮನ ಮಕ್ಕಳು; ಭಕ್ತರು. ಭಕ್ತ ರಿಪ್ಪ ಸ್ಥಳವೇ ದೇವಲೋಕ. ಭಕ್ತನ ದೇಹವೇ ಕೈಲಾಸ. ಪುಣ್ಯ ಕ್ಷೇತ್ರಗಳಿಗೆ ಹೋದರೆ ಮುಕ್ತಿಯೆಂಬ ಮೂಢ ಕಲ್ಪನೆಯುಳ್ಳ ಜನರ ಕಣ್ಣು ತೆರೆಸುತ್ತವೆ ಬಸವಣ್ಣನವರ ಈ ನುಡಿಗಳು. ಮೋಕ್ಷಾಪೇಕ್ಷೆಯಿಂದ ತೀರ್ಥಯಾತ್ರೆ ಮಾಡಲು ಸಹಸ್ರಾರು ರೂ.ಗಳ ವೆಚ್ಚ ಮಾಡುವವರು ಅಣ್ಣನ ಈ ಮಾತುಗಳನ್ನು ಅರ್ಥ ಮಾಡಿಕೊಳ್ಳಬೇಕು.

ಶಿವಾಚಾರವೇ ಶಿವಲೋಕವೆನ್ನುತ್ತಾರೆ ಬಸವಣ್ಣನವರು. ಮಾಡಬಾರದ ಹೇಸಿ ಕೆಲಸ ಮಾಡಿ ಗಂಗೆಯಲ್ಲಿ ಸ್ನಾನ ಮಾಡಿದರೆ ಆ ಪಾಪ ಹೋಗಬಾರದು–

> ಮೀಪರೆ ಪೋಪರೆ ಪಾಪವೇನದು ಕೆಸರೆ,
> ಮೀಪರೆ ಮೈಯ ಮಲ ಪೋಪುದಾ
> ಪಾಪ ಲೇಪವಾಗಿಕ್ಕು ಸರ್ವಜ್ಞ"

ಸ್ನಾನ ಮಾಡಿದರೆ ಮೈ ಶುಚಿಯಾಗಬಹುದೇ ವಿನಃ ಪವಿತ್ರವಾಗಲಾರದು. ಮೈ ಶುಚಿಗಿಂತ ಮನದ ಶುಚಿ ಮುಖ್ಯ. ಅದಕ್ಕೆ ಸದಾಚಾರ, ಭಕ್ತಿ ಮತ್ತು ಜ್ಞಾನಕಾರುಣ್ಯಗಳ ಮಹಾನದಿಗಳಲ್ಲಿ ಸ್ನಾನ ಮಾಡಬೇಕು. ಪುಣ್ಯ-ಪಾಪಗಳ ಬಗ್ಗೆ ವೈಚಾರಿಕ ಅರಿವು ಮೂಡಬೇಕು.

ಹೀಗೆ ನೆಲ-ಜಲಗಳ ಪವಿತ್ರತೆ-ಅಪವಿತ್ರತೆ ಭಾವನೆಗಳನ್ನು ಕಳೆದ ಬಸವಣ್ಣನವರು ದೇಹದ ಅಂಗಾಂಗಗಳ ಬಗೆಗೂ ಇದ್ದ ಮೇಲು ಕೀಳು ಭಾವನೆಯನ್ನು ಹೋಗಲಾಡಿಸಿದರು. ಬಲಗೈ ಶ್ರೇಷ್ಠ, ಎಡಗೈ ಕನಿಷ್ಠ-ಎಂಬ ಭಾವನೆ ನಮ್ಮಲ್ಲಿ ಅನೇಕರಲ್ಲಿ ಇನ್ನೂ ಇದೆ. ಆದರೆ ಬಸವಣ್ಣನವರು ಆ ಕನಿಷ್ಠದ ಎಡಗೈಯನ್ನೇ ಇಷ್ಟಲಿಂಗ ಪೂಜೆಗೆ ಪೀಠವನ್ನಾಗಿ ಮಾಡಿ ಅದನ್ನು ಶ್ರೇಷ್ಠಗೊಳಿಸಿದರು. ಇದನ್ನು ನೋಡಿದಾಗ ಬಸವಣ್ಣನವರ ಪ್ರತಿಯೊಂದು ಕೃತಿಯೂ ವೈಜ್ಞಾನಿಕ ಒರೆಗಲ್ಲಿಗೆ ನಿಲ್ಲುವಂತಹುದೆಂಬುದು ನಮಗೆ ಸ್ಪಷ್ಟವಾಗುತ್ತಿದೆ.

ಬಸವಣ್ಣನವರು ಧರ್ಮಕ್ಕೆ ಒಂದು ನೂತನ ಸ್ವರೂಪವನ್ನೇ ತಂದುಕೊಟ್ಟರೆಂದು ಹೇಳಬಹುದು. ಧರ್ಮ ಇರುವುದು ಮಾನವನನ್ನು ಮಹದೇವನನ್ನಾಗಿ ಮಾಡುವುದಕ್ಕಾಗಿ. ಧರ್ಮದ ನೆರಳಿನಲ್ಲಿ ದುಃಖಿಗೆ ನೆಮ್ಮದಿ ದೊರೆಯಬೇಕು: ಸಾಹಸಿಗೆ ಮಾರ್ಗದರ್ಶನವಾಗಬೇಕು; ಬಿದ್ದವರು ಎದ್ದು ನಿಲ್ಲಲು ಆಧಾರ ಸಿಗಬೇಕು ಅಂತಿದ್ದರೆ ಮಾತ್ರ ಅದು ಧರ್ಮವೆನಿಸುತ್ತದೆ. ಸರ್ವರನ್ನೂ ಸಮನ್ವಯ ದೃಷ್ಟಿಯಿಂದ ಶುಭವಸ್ತು. ಸತ್ಯದತ್ತ ಒಯ್ಯುವುದೇ ಧರ್ಮ. ಅದು ಸಾಮಾನ್ಯರ ಸಾಧನೆಗೆ ಸುಲಭವಾಗಿ ನಿಲುಕುವಂತಿರಬೇಕಾದದು ಎಲ್ಲಕ್ಕಿಂತ ಮುಖ್ಯವಾದುದು. ಆ ಕೆಲಸವನ್ನು ಬಸವಣ್ಣನವರು ಮಾಡಿದರು. ಧರ್ಮವನ್ನು ಸಂಪ್ರದಾಯದ ಹಿಡಿತದಿಂದ ಬಿಡಿಸಿ ಸರ್ವರ ಸೊತ್ತನ್ನಾಗಿಸಿದರು.

'ಪ್ರತಿಯೊಬ್ಬ ವ್ಯಕ್ತಿಯೂ ಆಧ್ಯಾತ್ಮಿಕ ಸಾಧನೆಗೆ ಅರ್ಹ. ಸಂಸ್ಕಾರ, ದೇವಪೂಜೆಗಳು ಯಾವುದೇ ಒಂದು ವರ್ಗದ ವಿಶಿಷ್ಟ ಹಕ್ಕಲ್ಲ' ಎಂಬುದನ್ನು ಆಚರಣೆಗೆ ತಂದ ಬಸವಣ್ಣನವರು ವಾಸ್ತವವಾಗಿ 'ಧಾರ್ಮಿಕ ಪ್ರಜಾಸತ್ತೆ' ಯನ್ನು ಜನತೆಗೆ ತಂದುಕೊಟ್ಟರೆಂದರೆ ಅತಿಶಯೋಕ್ತಿಯಲ್ಲ. ಈ ಧಾರ್ಮಿಕ ಸ್ವಾತಂತ್ರ್ಯದ ಕುರುಹಾಗಿ ಅವರು ಬಳಸಿದ ಮಾರ್ಗ 'ಲಿಂಗ ಸಂಸ್ಕಾರ' ಮೇಲೂ ಕೀಳೆನ್ನದೆ, ಜಾತಿ–ಭೇದವಿಲ್ಲದೆ ಎಲ್ಲರಿಗೂ ಲಿಂಗ ಸಂಸ್ಕಾರ ಪಡೆದುಕೊಳ್ಳಲು ಅವಕಾಶ ಕಲ್ಪಿಸಿ, 'ಉಚ್ಚನೀಚ'ಗಳ ವಿಪರ್ಯಾಸವನ್ನು ನೀಗಿದರು.

ಲಿಂಗ ಸಂಸ್ಕಾರ ಪಡೆದವನು ಶರಣನಾಗುತ್ತಾನೆ. ಶರಣನಾದ ಬಳಿಕ ಅವನ ಪೂರ್ವ ಜಾತಿ ಅಳಿದುಹೋಗುತ್ತದೆ.

ಮಣ್ಣು ಮಡಿಕೆ ಮಣ್ಣಾಗದು ಕ್ರಿಯೆಯಿಳಿದು
ಬೆಣ್ಣೆ ಕರಗಿ ತುಪ್ಪವಾಗಿ ಮರಳಿ ಬೆಣ್ಣೆಯಾಗದು ಕ್ರಿಯೆಯಿಳಿದು
ಹೊನ್ನು ಕಬ್ಬುನವಾಗದು ಕ್ರಿಯೆಯಿಳಿದು
ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಾಗದು ಕ್ರಿಯೆಯಿಳಿದು
ಕೂಡಲಸಂಗನ ಶರಣನಾಗಿ ಮರಳಿ ಮಾನವನಾಗನು ಕ್ರಿಯೆಯಿಳಿದು

ಇಂತಹ ಧಾರ್ಮಿಕ ಸಮಾನತೆ ತಂದುಕೊಟ್ಟ ಬಸವಣ್ಣನವರ ವಿಚಾರಧಾರೆ ನಿಜಕ್ಕೂ ಅಮೋಘವಾದುದು.

**ಸ್ತ್ರೀ ಸ್ವಾತಂತ್ರ್ಯ**

ಬಸವಣ್ಣನವರ ಮತ್ತೊಂದು ಕ್ರಾಂತಿಯೆಂದರೆ ಸ್ತ್ರೀಯರಿಗೆ ಕೊಟ್ಟ ಸ್ವಾತಂತ್ರ್ಯ ಮತ್ತು ಪುರುಷನೊಂದಿಗೆ ಸರಿಸಮಾನತೆ. ಧಾರ್ಮಿಕ ವಿಧಿಗಳಲ್ಲಿ ಅವಕಾಶವೇ ಇಲ್ಲದಿದ್ದ ಸ್ತ್ರೀ ಬಸವಣ್ಣನವರ ಕಾಲದಲ್ಲಿ ಪುರುಷರಿಗೆ ಸರಿಸಮಾನಳಾಗಿ ಕಾಣಿಸಿಕೊಂಡಳು. ವೇದ ಉಪನಿಷತ್ತುಗಳಲ್ಲಿ ಇಂತಹ ಸ್ವಾತಂತ್ರ್ಯಕ್ಕೆ ಸಾಕ್ಷಿಯಾಗಿ ಅಲ್ಲೊಂದು ಇಲ್ಲೊಂದು ಉದಾಹರಣೆಗಳು ಸಿಕ್ಕಬಹುದು. ಆದರೆ ಹನ್ನೆರಡನೆಯ ಶತಮಾನದಲ್ಲಿ ಆದ ಸಾಮಾಜಿಕ ಸುಧಾರಣೆ ಮಹತ್ವಪೂರ್ಣವಾದುದು. ಅನುಭವ ಮಂಟಪದಲ್ಲಿ ಶರಣೆಯರಿಗೆ ದೊರೆತಿದ್ದ ಸ್ಥಾನ ಇಂದಿನ ವಿಧಾನಮಂಡಲ ಲೋಕಸಭೆಗಳಲ್ಲಿರುವ ಮಹಿಳಾ ಪ್ರತಿನಿಧಿಗಳಿಗಿರುವ ಸ್ಥಾನಕ್ಕಿಂತಲೂ ಕಡಮೆ ಇರಲಿಲ್ಲ.

ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ;
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ

ಎಂದು ಶಿವಯೋಗಿ ಸಿದ್ಧರಾಮಣ್ಣನವರು ಹೇಳಿದ್ದಾರೆ. ಹೆಣ್ಣಿಗೆ ಪ್ರತ್ಯಕ್ಷ ದೇವರ ಸ್ಥಾನವನ್ನು ಕೊಟ್ಟ ಹಿರಿಮೆ ಶರಣರದು. ಹೆಣ್ಣನ್ನು ಹೆಣ್ಣಾಗಿ ಕಾಣುವುದು ಪ್ರಕೃತಿ, ಹೆಣ್ಣನ್ನು ಹೆಂಡತಿಯಾಗಿ ಕಾಣುವುದು ವಿಕೃತಿ, ಅದೇ ಹೆಣ್ಣನ್ನು ತಾಯಿಯಾಗಿ ಕಾಣುವುದು ಸಂಸ್ಕೃತಿ. ಇಂತಹ ಸಂಸ್ಕೃತಿಯನ್ನು ಶರಣರು ಆಚರಿಸಿ ತೋರಿದ್ದಾರೆ.

"ಲಿಂಗಾಂಗ ರಚನೆಯಲ್ಲಿ ಹೆಣ್ಣು ಗಂಡಿನ ಭೇದವಿದ್ದರೂ — ಒಳಗೆ ಸುಳಿವ ಆತ್ಮ ಹೆಣ್ಣು ಅಲ್ಲ; ಗಂಡೂ ಅಲ್ಲ". ಈ ಸಂದರ್ಭದಲ್ಲಿ ಒಂದು ದೃಷ್ಟಾಂತ ನೆನಪಿಗೆ ಬರುತ್ತದೆ.

ಡಯೋಜನೀಸ್ ಓರ್ವ ತತ್ವಜ್ಞಾನಿ. ಒಮ್ಮೆ ಅವನು ಮನುಷ್ಯರ ಎಲುಬುಗಳ ಕಟ್ಟೊಂದನ್ನು ಗಮನವಿಟ್ಟು ನೋಡುತ್ತಿದ್ದನು. ಅದನ್ನು ಕಂಡ ಅಲೆಗ್ಸಾಂಡರ್

ಏನು ನೋಡುತ್ತಿರುವೆ? ಎಂದು ಕೇಳುತ್ತಾನೆ. ಅದಕ್ಕೆ ಡಯೋಜನೀಸ್ ಕೊಡುವ ಉತ್ತರ : ನಿನ್ನ ತಂದೆಯ ಮೂಳೆಗೂ, ಅವನ ಗುಲಾಮರ ಮೂಳೆಗೂ ಯಾವ ವ್ಯತ್ಯಾಸವೂ ಇಲ್ಲದಿರುವುದನ್ನು !''

ಈ ದೃಷ್ಟಾಂತದ ಹಿನ್ನೆಲೆಯಲ್ಲಿ ಒಂದು ಗಂಭೀರ ಸತ್ಯ ಅಡಗಿರುವುದನ್ನು ನಾವು ಗಮನಿಸಬಹುದು. ಆಳವಾಗಿ ವಿಚಾರ ಮಾಡಿದರೆ ಎಲ್ಲರೂ ಸಮಾನರು ಎಂಬ ತತ್ತ್ವದ ದರ್ಶನವಾಗುತ್ತದೆ.

ಬಸವಣ್ಣನವರು ಹೇಳಿದುದು ಸಕಲ ಜೀವಾತ್ಮರಿಗೆ ಲೇಸ ಬಯಸುವ ಧರ್ಮ. ಅಂತೇ ಅವರು ವೇಶ್ಯೆಯರು, ಕುಡುಕರು, ಕಳ್ಳರು ಮೊದಲಾದ ಪತಿತರನ್ನು ಪರಿವರ್ತಿಸಿ ಸಮಾಜದಲ್ಲಿ ಸ್ಥಾನಮಾನ ಕಲ್ಪಿಸಿಕೊಟ್ಟರು. ಅವರೆಲ್ಲರಿಗೂ ಧಾರ್ಮಿಕ ಸಂಸ್ಕಾರ ಕೊಟ್ಟು, ಸಾತ್ವಿಕ ಜೀವನ ನಡೆಸುವ ವಿಶ್ವಾಸವನ್ನು ಅವರಲ್ಲಿ ಮೂಡಿಸಿದರು.

**ಸಾಮಾಜಿಕ ಸಮತೆ**

ಸಾಮಾಜಿಕ ಸಮತೆ ಎನ್ನುವುದು, ಭಾರತಕ್ಕೆ ಬಸವಣ್ಣನವರು ಕೊಟ್ಟ ದಿವ್ಯೌಷಧಿ; ಇಂದು ರಾಷ್ಟ್ರದಲ್ಲಿ ವಿಷದ ಗಾಳಿಯನ್ನು ಬಿಡುತ್ತಿರುವ ಜಾತೀಯತೆಯ ಸರ್ಪಕ್ಕೆ ಬಹುಶಃ ಬಸವಣ್ಣನವರ ಸಮಾಜಶಾಸ್ತ್ರ ಪರಿಣಾಮಕಾರಿ ಮದ್ದಾಗಬಲ್ಲದೆಂದು ಕಾಣುತ್ತದೆ. ಹುಟ್ಟಿನಿಂದ ಜಾತಿ ಎಂಬ ಈ ಕಲ್ಪನೆಯಿಂದ ಇಂದು ನಾವು ಅನುಭವಿಸಬಾರದಂತಹ ಸಮಸ್ಯೆಗಳನ್ನು ಅನುಭವಿಸುತ್ತಿದ್ದೇವೆ. ಬಸವಣ್ಣನವರು ಎಂಟುನೂರು ವರ್ಷಗಳ ಹಿಂದೆಯೇ ಅದಕ್ಕೆ ಪರಿಹಾರ ಕೊಟ್ಟು ಹೋಗಿದ್ದಾರೆ. ಆದರೆ ನಾವಿಂದು ಮರೆತಿದ್ದೇವೆ. ಮತ್ತು ಜಾತಿ ಕಲಹಗಳಲ್ಲಿ ಕಾಲ ಕಳೆಯುತ್ತಿದ್ದೇವೆ.

ಜಾತಿ ಭಾವನೆ ಇರುವೆಡೆ ಧರ್ಮ ಬಾಳಲು ಸಾಧ್ಯವಿಲ್ಲ. ಎಲ್ಲಿ ಧರ್ಮವಿಲ್ಲ, ಅಲ್ಲಿ ಜೀವನವಿಲ್ಲ. ಆದುದರಿಂದ ಮೂಲ ಸಮಸ್ಯೆಯಾದ ಜಾತಿಯ ಬೇರನ್ನ ಕಿತ್ತು ಮುರಿದು ಹಾಕಬೇಕು.

ಇಂದು ಎಲ್ಲರೂ ಜಾತ್ಯತೀತತೆ ಕುರಿತು ಮಾತನಾಡುವವರೇ. ಆದರೆ ಆಚರಣೆಯಲ್ಲಿ ತರುವುದರಲ್ಲಿ ನಾವೆಷ್ಟು ಮುಂದಿದ್ದೇವೆ ಎನ್ನುವುದು ಪ್ರಶ್ನೆಯಾಗಿಯೇ ಉಳಿಯುತ್ತದೆ. ಈ ವಿಷಯದಲ್ಲಿ ಬಸವಣ್ಣನವರ ಸಂದೇಶವೊಂದೇ ಸರಿಹೊಂದುವುದು ಧಾರಾಳವಾಗಿ ಹೇಳಬಹುದು.

ಸಮಾಜದಲ್ಲಿ ಆಚರಣೆಯಲ್ಲಿದ್ದ ಅಸ್ಪೃಶ್ಯತೆಯ ಬಗ್ಗೆ ಬಸವಣ್ಣನವರು ಬಹಳ ನೊಂದುಕೊಂಡರು. ಅವರ ದೃಷ್ಟಿಯಲ್ಲಿ ಹೊಲೆತನ ಹುಟ್ಟಿನಿಂದ ಬರುವುದಲ್ಲ.

"ಅನೃತವನಾಡುವುದೇ ಹೊಲೆ ; ಜೀವವಧೆ ಮಾಡುವುದೇ ಹೊಲೆ ; ಪರ ಸತಿಯೂ
ಕೂಡ ಕಾಮ ಭೋಗಕ್ಕೆಳಸುವುದೇ ಹೊಲೆ".

ಉಚ್ಚಕುಲದವನೆನಿಸಿದ ಮಧುವರಸನ ಮಗಳನ್ನು ಕೀಳು ಕುಲದವನೆನಿಸಿದ ಹರಳಯ್ಯನ ಮಗನಿಗೆ ಕೊಟ್ಟು ಮದುವೆ ಮಾಡಿಸಿ ಬಸವಣ್ಣನವರು ಒಂದು ಮಹಾ ಕ್ರಾಂತಿಯನ್ನೇ ಮಾಡಿದರು. ನವನಾಗರೀಕತೆಯ ಈ ಕಾಲದಲ್ಲಿ ಅಂತರ ಜಾತೀಯ ವಿವಾಹ ನಡೆಯುವುದೇನೂ ಹೆಚ್ಚಲ್ಲ ; ಆದರೆ ಎಂಟು ಶತಮಾನಗಳ ಹಿಂದೆ, ಸಮಾಜವು ಸಂಪೂರ್ಣವಾಗಿ ಸಂಪ್ರದಾಯದ ಹಿಡಿತದಲ್ಲಿದ್ದಾಗ ಅಂತರ್ಜಾತೀಯ ವಿವಾಹ ನಡೆಸುವುದೆಂದರೆ ಅದು ಸಾಮಾನ್ಯ ಮಾತಲ್ಲ.

ಸಂಸ್ಕಾರದಿಂದ ಎಲ್ಲರೂ ಶರಣರಾಗಬಹುದೆಂದು ಬಸವಣ್ಣನವರು ಸಾರಿದರು. ಈ ಸಂದರ್ಭದಲ್ಲಿ ಡಾ॥ ರಾಧಾಕೃಷ್ಣನ್ ಅವರು 'ಧರ್ಮ ಮತ್ತು ಸಮಾಜ' ಎಂಬ ಪುಸ್ತಕದಲ್ಲಿ ಹೇಳಿರುವ ಮಾತುಗಳು ಗಮನಾರ್ಹವಾಗಿವೆ, ಅವರು ಬಸವಣ್ಣನವರ ವಿಚಾರಧಾರೆಯನ್ನು ಅತ್ಯಂತ ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ.—

Brahminhood is not an order but a temperament. Any one can have it, though many born in Brahmin caste maybe without it. It is independant of Sex or Calling, birth or breeding. Every one has a right for Brahminhood.

ಬಸವಣ್ಣನವರು ಇಂತಹ ಸಾಮಾಜಿಕ ಕ್ರಾಂತಿಯನ್ನು ಸಾಧಿಸಿದುದು ತಮ್ಮ ಸಹೃದಯತೆಯಿಂದ ; ಸಜ್ಜನಿಕೆಯಿಂದ, ಸದಾಚಾರದಿಂದ ; ಸದು ವಿನಯದಿಂದ— ವಿವೇಕಾನಂದರು ಇದೇ ಮಾತನ್ನು ಹೇಳುತ್ತಾರೆ.

"It is the heart that conquers not the brain. Books and learning, yoga and meditation-all are but dust compared to love."

ಬಸವಣ್ಣನವರು "ಎನಗಿಂತ ಕಿರಿಯರಿಲ್ಲ ; ಶಿವಭಕ್ತರಿಗಿಂತ ಹಿರಿಯರಿಲ್ಲ" ಎನ್ನುವ ಸಂಪನ್ನರು. ಅವರ 'ಕಿರಿತನ'ದ ಹಿರಿತನಕ್ಕೆ ಲಕ್ಷ ಲಕ್ಷ ಸಂಖ್ಯೆಯ ಜನ ಶರಣಾದರು ; ಶರಣರಾದರು

**ಆರ್ಥಿಕ ಸುಧಾರಣೆ**

ಆರ್ಥಿಕ ರಂಗದಲ್ಲಿ ಬಸವಣ್ಣನವರ ವಿಚಾರ ಕ್ರಾಂತಿಕಾರಕವಾಗಿದೆ. ಪ್ರತಿಯೊಬ್ಬ ಶರಣನೂ ಏನಾದರೊಂದು ಕಾಯಕ ಮಾಡಲೇಬೇಕೆಂಬ ಕಟ್ಟಳೆಯಿತ್ತು.

ಆರ್ಥಿಕ ವ್ಯವಸ್ಥೆಗೆ ಸಮತಾವಾದದ ತಳಹದಿ ಹಾಕಿದರು ಬಸವಣ್ಣನವರು. ಕಾಯಕದಿಂದ ಬಂದ ಪ್ರತಿಫಲವು ವ್ಯಕ್ತಿಯ ಜೀವನಾವಶ್ಯಕತೆಗಳನ್ನು ಪೂರೈಸಬೇಕು. ಆದರೆ ಅತಿ ಸಂಗ್ರಹಕ್ಕೆ ಅವಕಾಶವಿರಕೂಡದು. ಕಾಯಕವೇ ಕೈಲಾಸ-ಇದು ಬಸವಣ್ಣನವರ ವಿಚಾರ. ಕಾಯಕಕ್ಕೆ ಗೌರವವನ್ನಷ್ಟೇ ಅಲ್ಲ ದೈವತ್ವವನ್ನು ತುಂಬಿದ ಹಿರಿಮೆ ಶರಣರದು.

ಬಸವಣ್ಣನವರಿಗೆ ಗುರು ಲಿಂಗ ಜಂಗಮರ ಬಗ್ಗೆ ಅಪಾರ ಭಕ್ತಿ ಇದ್ದರೂ ಅವರು ಕಾಯಕಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ-

"ಗುರುವಾದರೂ ಕಾಯಕದಿಂದಲೇ ಮುಕ್ತ."

ಬಸವಣ್ಣನವರ ಈ ವಿಚಾರಧಾರೆಯನ್ನು ಕುರಿತು ಆರ್ಥರ್ ಮೈಲ್ಸ್ ಎಂಬುವರು.

"Whatever the legend may say about Basava, the fact is fully clear that he was the first Indian free thinker. He might be called the Martin Luthor of India" ಎಂದು ಹೇಳಿದ್ದಾರೆ. ಬಹುಶಃ ಬಸವಣ್ಣನವರ ಸ್ವತಂತ್ರ ವ್ಯಕ್ತಿತ್ವಕ್ಕೆ ಈ ಮಾತು ಸಾಕೆಂದು ಕಾಣುತ್ತದೆ.

ಬಸವಣ್ಣನವರಿಂದ ಕನ್ನಡ ಸಾಹಿತ್ಯಕ್ಕೆ ಸಂದಿರುವ ಸೇವೆಯಂತೂ ಚಿರಸ್ಮರಣೀಯ. ಪಂಡಿತರ, ವಿವಿಧ ಕಲಾಮಂಡಿತರ ಬಂಧನದಲ್ಲಿದ್ದ ಸಾಹಿತ್ಯವನ್ನು ಜನಸಾಮಾನ್ಯರ ಬಳಿಗೆ ಒಯ್ದರು. ಅವರ ಕಾಲದಲ್ಲಿ ಬೆಳೆದ ವಚನ ಸಾಹಿತ್ಯ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದೆ.

ವಚನ ಸಾಹಿತ್ಯದಲ್ಲಿ ಆಧ್ಯಾತ್ಮಿಕ ಶಕ್ತಿ, ಸಾಮಾಜಿಕ ನೀತಿ, ಮಾನಸಿಕ ಚಿಂತನೆ ಎಲ್ಲ ಕೂಡಿರುವುದರಿಂದ ಅದು ಅತ್ಯಂತ ಸತ್ವಭರಿತವಾಗಿದೆ. "ಉಪನಿಷತ್ತಿನಲ್ಲಿರುವುದೆಲ್ಲ ವಚನ ಸಾಹಿತ್ಯದಲ್ಲಿದೆ. ಆದರೆ ವಚನಸಾಹಿತ್ಯದಲ್ಲಿರುವುದೆಲ್ಲ ಉಪನಿಷತ್ತಿನಲ್ಲಿಲ್ಲ" ಎಂದು ಓರ್ವ ಹಿರಿಯರು ವಚನ ಸಾಹಿತ್ಯದ ಹಿರಿಮೆಯನ್ನು ಹೊಗಳಿದ್ದಾರೆ.

ಹೀಗೆ ಬಸವಣ್ಣನವರು ತಮ್ಮ ಜೀವಿತದ ಕೇವಲ ಅಲ್ಪಾವಧಿಯಲ್ಲಿ ಜಗತ್ತೇ ಬೆರಗುಗೊಳ್ಳುವಂತಹ ಸಾಧನೆಯನ್ನು ಮಾಡಿದ್ದಾರೆ ಅವರ ನುಡಿಗಳು ಎಲ್ಲ ಕಾಲಕ್ಕೂ ಅನ್ವಯವಾಗುವ ಅಮೃತ ಚೇತನ.

ಸಮಾಜವಾದಿ ಸೂತ್ರದ ಮೇಲೆ ರಾಷ್ಟ್ರ ಪುನರ್ನಿರ್ಮಾಣದಲ್ಲಿ ತೊಡಗಿರುವ ನಮಗೆ ಬಹುಶಃ ಬಸವಣ್ಣನವರ ಸಂದೇಶ ದಾರಿ ದೀಪವಾಗಬಲ್ಲುದು: ದಿವ್ಯ ರಕ್ಷೆಯಾಗಬಲ್ಲುದು.

"ಇವನಾರವ ಇವನಾರವ ಇವನಾರವ ಎಂದೆನಿಸದಿರಯ್ಯ
ಇವ ನಮ್ಮವ ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯ.

ಎನ್ನುವ ಸರ್ವಜೀವ ಪ್ರೇಮದ ಸೂತ್ರವನ್ನು ಬಸವಣ್ಣನವರು ಸಮಾಜಕ್ಕೆ ಕೊಟ್ಟು ಹೋಗಿದ್ದಾರೆ. ಇಂದಿನ ವಿಶ್ವಕ್ಕೆ ಅಣ್ಣನವರ ಮಾತು ದೀಕ್ಷಾ ಮಂತ್ರವಾಗಬೇಕು. ಅಂತಾದರೆ ಮಾತ್ರ ಇಂದು ಸಮಾಜದಲ್ಲಿ ತಾಂಡವಾಡುತ್ತಿರುವ ವ್ಯಕ್ತಿದ್ವೇಷ ದೂರವಾಗಿ ಸೌಹಾರ್ದದ ಸುಳಿಗಾಳಿ ಬೀಸೀತು.

---

## ಬೆಳೆ ಮತ್ತು ಬೆಳೆಪದ್ಧತಿಗಳ ಆಯ್ಕೆ

ಯಾವ ಬೆಳೆಯನ್ನು ಎಂಥ ಮಣ್ಣಿನಲ್ಲಿ ಯಾವಾಗ ಬೆಳೆಯಬೇಕು ಎಂಬುದನ್ನು ಪ್ರತಿಯೊಬ್ಬ ರೈತನೂ ಅವಶ್ಯವಾಗಿ ತಿಳಿದಿರಬೇಕು. ಯಾವುದೇ ಬೆಳೆಯನ್ನು ಆಯ್ಕೆ ಮಾಡುವಾಗ ಮಳೆಯ ಅವಧಿ ಮತ್ತು ಮಣ್ಣಿನ ನೀರನ್ನು ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯ ಇವುಗಳನ್ನು ಚೆನ್ನಾಗಿ ಗಮನದಲ್ಲಿಟ್ಟುಕೊಳ್ಳಬೇಕು. ಅದೇ ಜಮೀನಿನಲ್ಲಿ ಅದೇ ಬೆಳೆಯನ್ನು ಪ್ರತಿವರ್ಷವೂ ಸರ್ವಥಾ ಬೆಳೆಯಬಾರದು. ಕರ್ನಾಟಕದಲ್ಲಿ ಪ್ರಮುಖವಾಗಿ ಕೆಂಪು ಮತ್ತು ಕಪ್ಪು ಮಣ್ಣಿನ ಭೂಮಿಯನ್ನು ನಾವು ಕಾಣುತ್ತೇವೆ.

1. ಕೆಂಪು (ಕೆಬ್ಬೆ) ಮಣ್ಣಿನ ಜಮೀನು :– ಈ ಜಮೀನಿನಲ್ಲಿ ರಾಗಿ ಬೆಳೆ [illegible]ಗಿ ಬರುತ್ತದೆ. ಕ) ಶಕ್ತಿ, ಇಂಡಾಫ್–3, ಇಂಡಾಫ್–1 ಈ ದೀರ್ಘಾವಧಿ ತಳಿಗಳನ್ನು ಜೂನ್–ಜುಲೈನಲ್ಲಿ ಬಿತ್ತಬೇಕು. ಕಡಲೆಕಾಯಿ(ಶೇಂಗಾ) ಅಥವ ಮುಸುಕಿನ ಜೋಳವನ್ನೂ ಈ ಅವಧಿಯಲ್ಲಿ ಬಿತ್ತಬಹುದು. ಗ) ಪೂರ್ಣ ಮತ್ತು ಪಿ. ಆರ್–202 ರಾಗಿಯ ಅಲ್ಪಕಾಲಾವಧಿ ತಳಿಗಳನ್ನು ಆಗಸ್ಟ್ ಮೊದಲವಾರದವರೆಗೂ ಬಿತ್ತಬಹುದು.

2. ಕಪ್ಪು (ಎರೆ) ಮಣ್ಣಿನ ಜಮೀನು : ಕ) ಕಡಲೆಕಾಯಿ, ಹತ್ತಿಯ ಮಿಶ್ರ ಬೆಳೆ ಅಥವ ಸಜ್ಜೆ–ಕಡಲೆಯ ಮಿಶ್ರ ಬೆಳೆಯನ್ನು ಜೂನ್‌ನಲ್ಲಿ ಬಿತ್ತಬೇಕು. ಗ) ಮುಂಗಾರು ಮಳೆ ಬರುವುದು ತಡವಾದರೆ ಹತ್ತಿ ಅಥವ ಕಲೆಕಾಯಿಯ ಬೆಳೆಗಳಲ್ಲಿ ಯಾವುದಾದರೂ ಒಂದನ್ನು ಬಿತ್ತಬೇಕು. ಚ) ಮಾಗಿ ಬೆಳೆಯಾದರೆ ಜೋಳ ಮತ್ತು ಕುಸುಬೆಯನ್ನು ಸೆಪ್ಟೆಂಬರ್‌ನಲ್ಲಿ ಬಿತ್ತಬೇಕು.

ಮಿಶ್ರ ಬೆಳೆಯನ್ನಿಡುವುದು ಒಂದು ವಿಧದಲ್ಲಿ ಜೀವ ವಿಮೆಯಿದ್ದಂತೆ. ಒಂದು ಬೆಳೆ ಕೈ ಕೊಟ್ಟರೂ ಮತ್ತೊಂದರಿಂದ ಅಲ್ಪ ಸ್ವಲ್ಪ ಇಳುವರಿ ಗಿಟ್ಟಿಸಬಹುದು. ಮಾಗಿ ಬೆಳೆಯನ್ನು ಸೆಪ್ಟೆಂಬರ್–ಅಕ್ಟೋಬರ್ ಅವಧಿಯಲ್ಲಿ ಬಿತ್ತಬೇಕು. ಅಧಿಕ ಇಳುವರಿ ತಳಿಗಳನ್ನು ಬಿತ್ತಿದಾಗ ಜಮೀನಿನಲ್ಲಿದ ತೇವಾಂಶವನ್ನು ಸಮರ್ಥವಾಗಿ ಉಪಯೋಗಿಸಿಕೊಳ್ಳಿ. [ಐ. ಸಿ. ಎ. ಆರ್.] ನವದೆಹಲಿ

# ಶರಣರಿಂದ ಕಲಿಯಬೇಕಾದ್ದೇನು ?

—ಎಂ. ಎ. ನೀಲಾಂಬಿಕಾ

ಇಂದು ಯಾವ ವ್ಯಕ್ತಿಯನ್ನು ನೋಡಿದರೂ ಅತೃಪ್ತಿ, ಅತ್ಯಾಸೆ, ಅಸಹ
ದ ಸುಳಿಯಲ್ಲಿ ಸಿಕ್ಕಿ ಈಜಿ ದಡ ಸೇರಲು ದಾರಿಗಾಣದೆ ಬಳಲಿ ಜೀವನದಲ್ಲಿ
ಟಾದ ಸಮಸ್ಯೆಗಳ ಪರಿಹಾರ ಕಾಣದೆ ಪರಿತಪಿಸುತ್ತಿದ್ದಾನೆ. ತಾನೊಬ್ಬ ನಗು
ಸಾಕು ಜಗವಳಲಿ ನನಗೇನು ? ಎಂಬ ಮನೋಭಾವವನ್ನು ಹೊಂದಿದ ಕೆಲ
ರು ದ್ವೇಷ ಅಸೂಯೆಗಳಿಂದಕೂಡಿ ಇತರರನ್ನು ಹೇಗೆ ಹಿಂಸಿಸಿ ತಾವು ಶ್ರೀಮಂತ
ಕೊಳ್ಳಬೇಕು ಎಂಬುದರ ಕಡೆ ಗಮನಹರಿಸುತ್ತಾರೆ. ಇಂಥ ಜನರು ಕೇವಲ
ದು ಕಾಲಕ್ಕೆ ಮಾತ್ರ ಸೀಮಿತರಾಗಿಲ್ಲ. ಅವರನ್ನು ತಿದ್ದಿ ಸನ್ಮಾರ್ಗಕ್ಕೆ ಒಯ್ಯಲು
ತ್ತಮ ಮಾರ್ಗದರ್ಶಕನ ಅವಶ್ಯಕತೆ ಕಂಡುಬಂದಾಗ ಮಹಾಪುರುಷರು ಜನಿಸಿ
ರ ಸಮಸ್ಯೆಗೆ ಪರಿಹಾರವನ್ನು ಒದಗಿಸಿ ನಾವು ಜೀವನದಲ್ಲಿ ಹೇಗಿರಬೇಕೆಂಬು
ನ್ನು ತಿಳಿಸುತ್ತಾರೆ. ಪ್ರಸ್ತುತ ಅಂಥ ಮಹಾಪುರುಷರಾದ ಶರಣರಿಂದ ನಾವು
ಾವ ಗುಣಗಳನ್ನು ಕಲಿಯಬೇಕು ಅವನ್ನು ಹೇಗೆ ಜೀವನದಲ್ಲಿ ಅಳವಡಿಸಿಕೊಳ್ಳ
ಕೆಂಬುದನ್ನು ಸ್ಥೂಲವಾಗಿ ತಿಳಿಸಲು ಯತ್ನಿಸಿದ್ದೇನೆ.

ಶರಣರಲ್ಲಿ ಕಂಡು ಬರುವ ತ್ಯಾಗಮನೋಭಾವ ಸಮಾನತೆ, ಕಾಯಕತತ್ವ
ಷ್ಟಿ ಸಂಗ್ರಹಿಸದಿರುವುದು ಮುಂತಾದ ಗುಣಗಳನ್ನು ಇಂದಿನ ಪರಿಸ್ಥಿತಿಯಲ್ಲಿ
ವು ಅವಶ್ಯಕವಾಗಿ ಕಲಿಯಲೇ ಬೇಕಾಗಿದೆ. ಇಂದು ನಮ್ಮಲ್ಲಿ ಹೆಚ್ಚಾಗಿ ಹಣಕ್ಕೆ
ೆ ಕೊಡುತ್ತೇವೆ ಹೊರತು ವ್ಯಕ್ತಿಯ ಗುಣಕ್ಕೆ ಅವನ ಜ್ಞಾನಕ್ಕೆ ಬೆಲೆ ಕೊಡು
ು ಕಡಿಮೆ ಆದರೆ ಶರಣರಲ್ಲಿ ಈ ಮನೋಭಾವವಿಲ್ಲ. ಅವರಲ್ಲಿ "ಹಾರುವ
ದಲಾಗಿ ಅಂತ್ಯಜ ಕಡೆಯಾಗಿ ಶಿವಭಕ್ತರೆಲ್ಲ ಒಂದೇ ಬಸವಣ್ಣನವರೇ ಒಂದೆಡೆ

'ಅಪ್ಪನು ನಮ್ಮ ಮಾದಾರ ಚನ್ನಯ್ಯ
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ
ಚಿಕ್ಕಯ್ಯನೆಮ್ಮಯ್ಯ ಕಾಣಯ್ಯ
ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ'

ದು ಹೇಳಿದಲ್ಲದೆ ಜಗದ ಜನರನ್ನು ಅವರು ಯಾರೇ ಆಗಲಿ 'ಇವನಾರವ,
ನಾರವ' ಎನ್ನದೆ ಇವನಮ್ಮವ; ಎಂಬ ಭಾವನೆ ಹೊಂದಿದ್ದರು ನಾವುಕೂಡ

ಅವಶ್ಯಕವಾಗಿ ಈ ಮನೋಭಾವ ತಾಳಬೇಕು. ಆಗ ಸಂವಿಧಾನ ರೂಪಿಸಿರು ರಾಷ್ಟ್ರೀಯ ಗುರಿಗಳಲ್ಲಿ ಒಂದಾದ ಜಾತ್ಯಾತೀತತೆ, ಭಾವೈಕ್ಯತೆಯನ್ನು ಹೊಂದಲ ಸಾಧ್ಯ.

ಶರಣರಂತೆ ನಾವು ತ್ಯಾಗ ಮನೋಭಾವವನ್ನು ಹೊಂದಿರಬೇಕು. ಎಲ್ಲವನ ತ್ಯಜಿಸಿ ಬಿಡ ಬೇಕೆಂದರ್ಥವಲ್ಲ. ಇಂದು ನಾವು ಅಶಾಶ್ವತವಾದದನ್ನು ಶಾಶ್ವ ವೆಂದರಿತು ಅವುಗಳನ್ನು ಹಿಡಿಯಲು ಹೋಗುತ್ತೇವೆ ನಾವುಗಳಿಸಿದ ಹಣ ಅಂತಸ್ತು ಯಾವುದೂ ನಮ್ಮ ಹಿಂದೆ ಮರಣಹೊಂದಿದಾಗ ಬರುವುದಿಲ್ಲ. ಆದರೆ ನಾ ಗಳಿಸಿದ ಪುಣ್ಯ ಪಾಪಗಳು ಮಾತ್ರ ಹಿಂಬಾಲಿಸಿ ಬರುತ್ತದೆ ಎಂದು ಕೆಲವರ ಹೇಳುತ್ತಾರೆ. ಅದು ನಿಜವಾದುದಾದರೆ ನಾವು ಬೇರೆಯವರನ್ನ ಹಿಂಸಿಸಿ ಶ್ರೀಮಂತರ ಎಂದು ಏಕೆ ಹೊಗಳಿಸಿಕೊಳ್ಳಬೇಕು? 'ಶರಣರು ಈ ಐಹಿಕ ಜೀವನದ ಅಶಾಶ್ವ ಯನ್ನರಿತಿದ್ದರು. ಆದ್ದರಿಂದಲೇ ಶಾಶ್ವತ ಸುಖದತ್ತ ಸಾಗಲು ಇಲ್ಲಿಯೂ ಅಲ್ಲಿಯ ಸಲ್ಲುವಂತವರಾಗಲು ಸಕಲ ಐಶ್ವರ್ಯವನ್ನ ತೊರೆದು ಕಲ್ಯಾಣದತ್ತ ಬರುತ್ತಾರ ಕಲ್ಯಾಣದಲ್ಲಿದ್ದ ಮೋಳಿಗೆ ಮಾರಯ್ಯನೆಂಬ ಶರಣ ಕಟ್ಟಿಗೆ ಕಾಯಕ ಅನುಸರಿಸ ತಿದ್ದವ ಹಿಂದೆ ಮಹದೇವ ಭೂಪಾಲನೆಂಬ ಕಾಶ್ಮೀರದ ಅರಸನಾಗಿದ್ದ ರಾಜನಾ ದ್ದರೂ ಐಶ್ವರ್ಯದ ಅಶಾಶ್ವತೆಯನ್ನರಿತು ಕಲ್ಯಾಣದ ಕಾರ್ಯಕ್ಷೇತ್ರಕ್ಕೆ ಅಡಿ ಇಡ ತ್ತಾನೆ. ಬಸವಣ್ಣನವರೇ ಒಂದೆಡೆ

"ಆಯುಷ್ಯ ಉಂಟು ಪ್ರಳಯವಿಲ್ಲೆಂದು ಅರ್ಥವ ಮಡುಗುವಿರಿ
ಆಯುಷ್ಯವು ತೀರಿ ಪ್ರಳಯ ಬಂದರೆ ಅರ್ಥವನುಂಬುವರಿಲ್ಲ
ನೆಲನನಗೆದು ಮಡುಗದಿರಾ ! ನೆಲನುಂಗಿದೊಡುಗುಳುವುದೆ ?
ಕಣ್ಣಿನಲಿ ನೋಡಿ, ಮಣ್ಣಿನಲಿಸೆರಹಿ, ಉಣ್ಣದೆ ಹೋಗದಿರಾ !
ನಿನ್ನ ಮಡದಿಗಿರಲೆಂದರೆ ಮಡದಿಯ ಕೃತಕ ಬೇರೆ
ನಿನ್ನೊಡಲು ಕೆಡೆಯಲು ಮತ್ತೊಬ್ಬನಲ್ಲಿಗಡಕದೆ ಮಾಣ್ಬರೆ
ಹೆಜ್ಜೇನಿಗಿಕ್ಕಿ ಹೆಗ್ಗುಜಿಯಾಗಬೇಡಾ !"

ಎಂದು ಹೇಳಿದ್ದಾರೆ. ಹೀಗೆ ನಾವು ಹಣವನ್ನು ಗಳಿಸಿ ಅದನ್ನು ಅನುಭವಿಸಿದೆ ಸಂಗ್ರ ಹಿಸಿದರೆ ಸತ್ಪಾತ್ರಕ್ಕೆ .ಸಲ್ಲುವುದಿಲ್ಲ ಆದ್ದರಿಂದ ಬೇರೆಯವರಿಗೆ ಮೋಸಮಾಡಿ ಹಣದ ರಾಶಿಯ ಮೇಲೆ ಕುಳಿತುಕೊಂಡರೆ ಸಾಕು ಜೀವನ ಸಾರ್ಥಕವಾಗುತ್ತದೆ ಎಂಬ ಮನೋಭಾವ ಹೊಂದಿರುವವರು ಇವರತ್ತ ದೃಷ್ಟಿ ಹರಿಸಬೇಕು.

ಲಕ್ಕಮ್ಮನ ಸಮಾಜವಾದ ತತ್ತ್ವ ಇಂದು ಪ್ರತಿಯೊಬ್ಬ ಹೆಣ್ಣುಮಗಳು ಕಲಿ ಯಲೇಬೇಕಾದ ಪಾಠ. ಲಕ್ಕಮ್ಮನ ಪತಿ ಮಾರಯ್ಯ ಒಮ್ಮೆ ಹೆಚ್ಚು ಅಕ್ಕಿಯನ್ನು

ಅರಿಸಿ ತಂದುದನ್ನು ಕಂಡು ಕನಲಿ 'ಅಲ್ಲಿಯೇ ಸುರಿದು ಬನ್ನಿ' ಎಂದು ಹೇಳಿ ಕಳುಹಿಸು ತ್ತಾಳೆ. ಕಾರಣ ಹೆಚ್ಚು ಸಂಗ್ರಹಿಸಿದರೆ ಬೇರೆಯವರಿಗೆ ಸಲ್ಲಬೇಕಾದ್ದನ್ನು ನಾವು ಕಿತ್ತುಕೊಂಡಂತಾಗುತ್ತದೆ. ಹಾಗೆ ಮಾಡಲು ನಮಗೆ ಯಾವ ಹಕ್ಕು ಇಲ್ಲ, ಆದ್ದ ರಿಂದ ನಾವು ಸಂಪಾದಿಸುವುದು ಅಂದಂದಿನ ಅಂಬಲಿಗೆ ಸರಿಹೋಗಬೇಕು, ಇದು ಅವಳ ವಾದ. ಭಕ್ತರಿಗೆ ಅತಿ ಆಸೆ ಸಲ್ಲದು, ಆಸೆಯೆಂಬುದು ಅರಸನಿಗೆ ಇರಬೇಕು. ಕಾರಣ ಆತ ಲೋಕವನ್ನು ರಕ್ಷಿಸಬೇಕಾದ ಜವಾಬ್ದಾರಿ ಹೊಂದಿದವನು ಎಂದು ನಿಷ್ಠು ರತೆಯಿಂದ ಹೇಳುತ್ತಾಳೆ. ಆದರೆ ಇಂದು ಪತಿ ಎಷ್ಟು ತಂದರೂ ತೃಪ್ತಿ ಹೊಂದದ ಸ್ತ್ರೀ ಇನ್ನು ಹೆಚ್ಚು ಆಶಿಸುತ್ತಾಳೆ. ಇದರಿಂದ ಅವರ ಮನಕ್ಕೆ ನೆಮ್ಮದಿ ಸಿಗದೆ ತೊಳ ಲಾಡುತ್ತಾರೆ. ಇದರಿಂದ ಸಮಾಜದಲ್ಲಿ ವರ್ಗಭೇದ ಉಂಟಾಗಲು ಸಾಧ್ಯ ಆ ಕಾರಣ ದಿಂದ ಇಂದು ಈ ಲಕ್ಕಮ್ಮನ ಪಾಠವನ್ನು ನಾವು ಕಲಿತಾಗ ಮಾತ್ರ ದೇಶದಲ್ಲಿ ಆಹಾರದ ಸಮಸ್ಯೆ ಕಡಿಮೆಯಾಗುತ್ತದೆ.

ಇಂದು ನಮ್ಮ ಘನಸರ್ಕಾರದವರು ಸೂಚಿಸಿರುವ "ದುಡಿಮೆ ಹೆಚ್ಚು ಮಾಡಿ ಮಾತು ಕಡಿಮೆ ಮಾಡಿ". ಎಂಬ ತಿಳುವಳಿಕೆಗೆ ಶರಣ ನುಲಿಯ ಚಂದಯ್ಯ ಸಾಕ್ಷಿ ಭೂತವಾಗಿದ್ದಾನೆ. ನಾವು ಮಾಡುವ ಕಾಯಕ ಪರಿಶುದ್ಧವಾಗಿರಬೇಕು. ಆದರಿಂ ಹೆಚ್ಚು ಫಲ ನಿರೀಕ್ಷಿಸಬಾರದು. ಗುರುಲಿಂಗಜಂಗಮನಾದರೂ ಕಾಯಕವ ಮಾಡಲೆ ಬೇಕು. ಆ ಕಾರಣದಿಂದಲೇ ಕೆಳಗೆ ಬಿದ್ದ ಲಿಂಗದ ಕೈಯ್ಯಲ್ಲೂ ಕಾಯಕ ಮಾಡಿಸ ತ್ತಾನೆ. ಅದು ಒಮ್ಮೆ ನುಲಿಯನ್ನು ಮಾರಲು ಕೊಂಡೊಯ್ದು ಹೆಚ್ಚು ಹಣವನ ಗಳಿಸಿ ತಂದಾಗ 'ನಿನ್ನಾಶೆಯ ಪಾಶಕ್ಕೆ ನೀನೇ ಹೋಗು' ಎಂದು ಝಂಕಿಸಿ ನುಡಿಯ ತ್ತಾನೆ. ನಿನ್ನನ್ನು ಪೂಜಿಸುವ ವೇಳೆಯಲ್ಲಿ ಮತ್ತೊಂದು ನುಲಿಯನ್ನು ಹೊಸೆ ಕಡಿಮೆ ಲಾಭದಲ್ಲಿ ಮಾರಿ ಎಲ್ಲರಿಗೂ ಒದಗಿಸುತ್ತೇನೆ ಎಂದು ಹೇಳುತ್ತಾನೆ. ಇಂ ನಮ್ಮ ಸಮಾಜದಲ್ಲಿ ಸೋಮಾರಿಗಳೇ ಹೆಚ್ಚು ಮಾಡುವ ಪ್ರತಿಯೊಂದು ಕೆಲಸದಲ್ಲಿ ತೃಪ್ತಿಯಿಲ್ಲ. ಯಾವ ವಸ್ತುವನ್ನು ಮಾರಿದರೂ ಹೆಚ್ಚು ಲಾಭವನ್ನು ಗಳಿಸುವ ಆ ಇಂಥ ಜನರು ನುಲಿಯಚಂದಯ್ಯನ ಕಾಯಕನಿಷ್ಠೆಯನ್ನರಿತು ದುಡಿದರೆ ದೇ ಸಮಸ್ಯೆ ಎಷ್ಟೋ ಕಡಿಮೆಯಾಗುತ್ತದೆ.

ಶರಣರಲ್ಲಿ ಯಾವ ಕೆಲಸವನ್ನ ಮಾಡಿದರೂ ಕೀಳಲ್ಲ ಅಕ್ಕಿ ಆರಿಸುವ ಕಾ ದಿಂದ ಇಡಿದು ತುರುಗಾಹಿ ಕಾಯಕದವರೆಗೂ ಇದ್ದರು. ಕಾಯಕದಲ್ಲಿ ಕುಲವನ್ನೇ ತ್ತಿರಲಿಲ್ಲ. ಪ್ರತಿಯೊಬ್ಬರಿಗೂ ಸಮಾನ ಸ್ಥಾನಗೌರವ ದೊರಕುತಿತ್ತು. ಆದರೆ ಇ ಆ ವ್ಯಕ್ತಿ ಯಾವ ಕಸುಬನ್ನು ಅನುಸರಿಸುತ್ತಾನೆ ಎಂಬುದನ್ನು ನೋಡಿ ಬೆಲೆ ಕ ತ್ತಾರೆ. ನಮ್ಮಲ್ಲಿ ಸಮಾನತೆ, ಭ್ರಾತೃತ್ವಭಾವನೆ ಉಂಟಾಗಬೇಕಾದರೆ ಶರಣ ದೃಷ್ಟಿಹರಿಸಬೇಕು.

( 65 ನೆ ಪುಟ ನೊ

# ಜೈನ ಸಿದ್ಧಾಂತ

—ಎಂ. ಡಿ. ವಸಂತರಾಜ್

ಸ್ಯಾದವಕ್ತವ್ಯಂ, ಸ್ಯಾದಸ್ತಿ ಅವ್ಯಕ್ತವ್ಯಂ, ಸ್ಯಾನ್ನಾಸ್ತಿ ಅವ್ಯಕ್ತವ್ ಸ್ಯಾದಸ್ತಿ ನಾಸ್ತಿ ಅವ್ಯಕ್ತವ್ ಎಂಬ ರೂಪದ ಈ ಸ್ಯಾದ್ವಾದವನ್ನು ಸಪ್ತಭಂಗೀನಯವೆಂದೂ ಹೆಸರಿಸಿದೆ.

ಆಚಾರ ಧರ್ಮ :–ಕರ್ಮ ಬಂಧದಿಂದ ಜೀವನು ಬಿಡುಗಡೆ ಪಡೆದು ಶಾಶ್ವತವಾದ ಅನಂತವಾದ ಅನಂತ ಸುಖ ಸಿದ್ಧಿ ಪಡೆಯುವ ಸಾಧನ ಮಾರ್ಗವು ಆಚಾರ ಧರ್ಮವು. 'ಸಮ್ಯಗ್ದರ್ಶನ ಜ್ಞಾನ ಚಾರಿತ್ರಾಣಿ ಮೋಕ್ಷ ಮಾರ್ಗಃ' ಸಮ್ಯಗ್ದರ್ಶನ, ಸಮ್ಯಗ್ ಜ್ಞಾನ ಮತ್ತು ಸಮ್ಯಕ್ಚಾರಿತ್ರಗಳು ಮೋಕ್ಷಸಾಧನ ಮಾರ್ಗವಾಗಿವೆ. ಇವುಗಳನ್ನು ರತ್ನತ್ರಯವೆಂದು ಹೆಸರಿಸುವ ವಾಡಿಕೆಯಿದೆ. ತತ್ವಾರ್ಥ ಶ್ರದ್ಧೆಯು ಸಮ್ಯಗ್ದರ್ಶನವು, ಸಮ್ಯಗ್ದರ್ಶನವಿಲ್ಲದವನ ಧರ್ಮಾಚರಣೆಯು ಮುಕ್ತಿಸಾಧಕವಾಗುವುದಿಲ್ಲ. ಸಮ್ಯಗ್‌ದರ್ಶನ ಸಂಪನ್ನನು ಮಾತ್ರ ಸಮ್ಯಗ್‌ಜ್ಞಾನ ಚಾರಿತ್ರ ಸಂಪನ್ನನಾಗಬಲ್ಲನಲ್ಲದೆ ಅನ್ಯಥಾ ಅಲ್ಲ. ಮುಕ್ತಿ ಸಾಧನೆಯಲ್ಲಿ ನೂತನ ಕರ್ಮಗಳ ಆಸ್ರವವಾಗದಂತ ಯತ್ನಶೀಲನಾಗಿರಬೇಕಾದ ಅಗತ್ಯವಿದೆ. ಈ ಆಸ್ರವನಿರೋಧ ಮಾಡಲು ಸಮ್ಯಕ್ತ್ವಶಾಲಿಯು ಮಾತ್ರ ಸಮರ್ಥನಾಗಿರುತ್ತಾನೆ.

ಜೀವನು ಕರ್ಮವಶನಾಗಿರುವುದಕ್ಕೆ ಅವನ ರಾಗ, ದ್ವೇಷ, ಮೋಹ ಭಾವಗಳು ಮತ್ತು ಈ ಭಾವವಶವಾಗಿ ನಡೆಯುವ ಕೃತ್ಯಗಳು ಕಾರಣವಾಗಿವೆ. ಆದ್ದರಿಂದ ಮನ ವಚನ ಕಾಯ ತ್ರಿಕರಣಗಳನ್ನು ಈ ರಾಗ, ದ್ವೇಷ, ಮೋಹ, ಭಾವಗಳಿಂದ ಶುದ್ಧವಾಗಿರಿಸಲು ಯತ್ನಮಾಡಬೇಕಾಗುವುದು. ಈ ಶುದ್ಧತೆಯ ಸಾಧನೆಯು ಒಮ್ಮೆಗೇ ಆಗಲಾರದು. ಆದ್ದರಿಂದ ತ್ರಿಕರಣವನ್ನು ಶುಭಪ್ರವೃತ್ತಿಯಲ್ಲಿ ತೊಡಗಿಸಿ ಅಂತಿಮವಾಗಿ ಶುದ್ಧತೆಯನ್ನು ಸಾಧಿಸಬಹುದು. ಜೇತನ ಆಚಾರ ಧರ್ಮವು ಈ ಪ್ರಕಾರದ ಯೋಜನೆಯುಳ್ಳದ್ದಾಗಿದೆ. ರಾಗ ದ್ವೇಷ ಮೋಹ ಭಾವ ಪ್ರೇರಿತನಾಗಿ ವ್ಯಕ್ತಿಯು ದುಷ್ಕೃತ್ಯಗಳಲ್ಲಿ ತೊಡಗುವುದು ಸರ್ವಸಾಧಾರಣವಾಗಿ ಕಂಡ ವಿಷಯವಾಗಿದೆ. ಮೊದಲನೆಯದಾಗಿ ಭಾವಗಳ ಮೂಲಕ ದುಷ್ಕೃತ್ಯಗಳಿಂದ ಸಾಧಕನು ತ್ರಿಕರಣ ಪೂರ್ವಕ ವಿರತನಾಗಬೇಕಾದ ಅಗತ್ಯವಿದೆ. ಇಂತಹ ದುಷ್ಕೃತ್ಯಗಳಲ್ಲಿ ಪ್ರಧಾನವಾದುದು ಹಿಂಸೆ. ಸಾಧಾರಣವಾಗಿ ಅನ್ಯಜೀವಿಯನ್ನು ಕೊಲೆ ಮಾಡುವುದನ್ನು ಹಿಂಸೆ ಎಂದು ತಿಳಿಯಲಾಗಿದೆ. ಆದರೆ ಜೈನ ಧಾರ್ಮಿಕ ಚಿಂತನೆಯನುಸಾರ 'ಹಿಂಸೆ'

ಬುದು ವಿಶಿಷ್ಟ ಅರ್ಥವ್ಯಾಪ್ತಿಗೊಂಡಿದೆ. ಜೀವಿಗಳಿಗೆ ಹಿಂಸೆಯಾಗದಂತೆ ತ್ರಿಕರಣ ಪೂರ್ವಕ ಜಾಗೃತಿವಹಿಸಿರುವ ವ್ಯಕ್ತಿಯಿಂದ ಅವನಿಗೆ ಗೋಚರವಾಗದಂತೆ ವನ ಕಾಯದ ಚಲನವಲನ ನಿಮಿತ್ತದಿಂದ ಜೀವಿಯೆಂದರೆ ಪ್ರಾಣಹಾನಿಯಾದಲ್ಲಿ ಡು ಹಿಂಸೆಯೆನಿಸುವುದಿಲ್ಲ, ಆದರೆ ಇದರ ವಿರುದ್ಧವಾಗಿ ಕ್ರೋಧ-ಮಾನ-ಮಾಯಾ-ೋಭ ಕಷಾಯಗಳ ಪರಿಣಾಮದಿಂದ ಪ್ರಮತ್ತನಾಗಿ ಜೀವಿಯೊಂದಕ್ಕೆ ಹಾನಿಯುಂಟು ಮಾಡಬೇಕೆಂಬ ಭಾವದ ಉದಯ ಮಾತ್ರ ನಿಮಿತ್ತದಿಂದಲೇ ಅವನಿಂದ ವಾಸ್ತವವಾಗಿ ಪ್ರಾಣಹಾನಿ ಸಂಭವಿಸದಿದ್ದರೂ ಅವನಿಗೆ ಹಿಂಸೆಯ ಪಾಪವು ಸಂಘಟಿಸುವುದು.[13] ೀಗೆ ಕಾಯನಿಮಿತ್ತದಿಂದಾಗುವ ಹಿಂಸೆಗಿಂತಲೂ ಅದರ ಮೂಲದಲ್ಲಿರುವ ಕ್ರೋಧಾದಿ ಭಾವಜನ್ಯವಾದ ಹಿಂಸೆ ಪರಿಣಾಮವೇ ತೀವ್ರವಾದುದು, ಘೋರವಾದದು. ಆತ್ಮನ ಧಃಪತನ ಹೇತುವು ಆದ್ದರಿಂದ ಆತ್ಮೋನ್ನತಿಯ ದಾರಿಯಲ್ಲಿ ನಡೆಯಲಪೇಕ್ಷಿಸು ವನು, ಇಂತಹ ಹಿಂಸೆಯಿಂದ ವಿರತಿ ಹೊಂದಬೇಕಾದ ಅರ್ಥಾತ್ ಅಹಿಂಸಾ ವ್ರತ ಧಾರಕನಾಗಬೇಕಾದ ಅಗತ್ಯವಿದೆ. ಈ ಅಹಿಂಸೆಯು ಜೈನ ಆಚಾರ ಧರ್ಮದ ಉಸಿ ರಾಗಿದೆ. ಸಾಧಾರಣವಾಗಿ ಅಹಿಂಸೆ, ಕೊಲೆ ಮಾಡದಿರುವುದು ಅಸ್ತೇಯ— ಕಳ್ಳತನ ಮಾಡದಿರುವುದು—

---

13. ತ. ಸ; ಪ್ರ. ಅ. ಸೂ. 13; ಶ್ರೀ ಪಂ. ಕೈಲಾಸಚಂದ್ರ ಶಾಸ್ತ್ರಿಯವರ ಹಿಂದೀ ವ್ಯಾಖ್ಯಾನ.

( ಮುಂದುವರಿಯುವುದು )

---

( 63 ನೇ ಪುಟದಿಂದ )

ಹೆಣ್ಣುಮಕ್ಕಳು ಅಕ್ಕನ ದಿಟ್ಟನಿಲುವನ್ನು ಮೈಗೂಡಿಸಿಕೊಳ್ಳಬೇಕು. ಯಾವು ದಾದರೊಂದು ಉದ್ಯೋಗವನ್ನನುಸರಿಸುತ್ತಿರುವ ಹೆಣ್ಣು ಸ್ವತಂತ್ರಳಾಗಿ ಜೀವನ ನಡೆ ಸದೆ ಬೇರೆ ಪುರುಷರ ಅವಲಂಬನೆ ಬೇಕೆಂದು ಇಚ್ಛಿಸಿದಾಗಲೇ ವರದಕ್ಷಿಣೆ ಸಮಸ್ಯೆ ಎದುರಾಗುತ್ತದೆ. ಅಕ್ಕನಂತೆ ಚೆನ್ನಮಲ್ಲಿಕಾರ್ಜುನನೇ ನನ್ನ ಪತಿ ಮಿಕ್ಕಿನ ಪುರುಷರು ನನಗಾಗದ ಮೋರೆ ನೋಡಣ್ಣ. ಎಂದು ಅಕ್ಕನ ಕೆಚ್ಚನ್ನು ಮೈಗೂಡಿಸಿಕೊಂಡರೆ ಸಮಸ್ಯೆಗಳನ್ನು ಪರಿಹರಿಸಬಹುದು.

ಒಟ್ಟಿನಲ್ಲಿ ಶರಣರಿಂದ ನಾವು ಕಲಿಯಬೇಕಾದ್ದು ಸಾಗರದಷ್ಟಿದೆ. ಅವರ ಮನೋಭಾವಗಳನ್ನು ನಾವು ಮೈಗೂಡಿಸಿಕೊಂಡಾಗ ನಮ್ಮ ಜೀವನ ಸಾರ್ಥಕವಾಗು ತ್ತದೆ, ಮತ್ತು ಅಂದು ಕಂಡ ಕಲ್ಯಾಣ ಇಂದು ಕಾಣುವುದರಲ್ಲಿ ಸಂಶಯವಿಲ್ಲ.

# ತುಮಕೂರು ಜಿಲ್ಲೆಯಲ್ಲಿ ಏಪ್ರಿಲ್ ತಿಂಗಳಿನಲ್ಲಿ

—ಈ

ವ್ಯವಸಾಯವು ಈ ದೇಶದ ಬಹುಪಾಲು ಜನರ ಮುಖ್ಯಕಸುಬು. ರಾ
ಒಟ್ಟು ವರಮಾನದ ಸುಮಾರು ಶೇ 49 ರಷ್ಟನ್ನು ದೇಶ ಬೊಕ್ಕಸಕ್ಕೆ ತಂದುಕೊ
ಈ ಕಸುಬು ಇಂದಿಗೂ ನಿಸರ್ಗಪ್ರಧಾನವಾಗಿಯೇ ಉಳಿದಿದೆ. ಮಳೆ, ಬಿಸಿಲು,
ಆರ್ದ್ರತೆ—ಇವು ವ್ಯವಸಾಯದ ಮೇಲೆ ಸದಾ ತಮ್ಮ ಪ್ರಭುತ್ವವನ್ನು ಹೊ
ವೈಜ್ಞಾನಿಕವಾಗಿ ನಾವು ಎಷ್ಟೇ ಮುಂದುವರಿದಿದ್ದರೂ ಕೂಡಾ, ನಿಸರ್ಗವು ನ
ದಿಗೆ ಸಹಕರಿಸದಿದ್ದರೆ ನಮ್ಮ ಪ್ರಯತ್ನಗಳೆಲ್ಲಾ ನಿಷ್ಫಲವಾಗುತ್ತವೆ.

ಭೌಗೋಳಿಕ ಸನ್ನಿವೇಶಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರ
ಬದಲಾಗುತ್ತಾ ಹೋಗುತ್ತವೆ. ಇದು ವ್ಯವಸಾಯದ ಮೇಲೆ ಸಾಕಷ್ಟು ಪರ
ವನ್ನುಂಟುಮಾಡುವುದರಿಂದ ಅದರಲ್ಲಿ ಭಿನ್ನತೆ ಕಂಡುಬರುವುದು ಅನಿವಾರ್ಯ.
ಕೂರು ಜಿಲ್ಲೆಯೂ ಕೂಡ ಇದಕ್ಕೆ ಹೊರತೇನಲ್ಲ. ಈ ಜಿಲ್ಲೆಯ ಭೌಗ
ವಿಸ್ತೀರ್ಣ 10,64,755 ಹೆಕ್ಟೇರುಗಳು. ಇದರಲ್ಲಿ ನಿವ್ವಳ ಸಾಗುವಳಿ
3,51,167 ಹೆಕ್ಟೇರುಗಳು. ವಿವಿಧ ನೀರಾವರಿ ಮೂಲಗಳಿಂದ ನೀರಾವರಿಗೊ
ರುವ ಪ್ರದೇಶ 42,651 ಹೆಕ್ಟೇರುಗಳು. ಅಂದರೆ ಸುಮಾರು ಶೇ. 14 ರಷ್ಟ
ನಿಗೆ ಮಾತ್ರ ನೀರಾವರಿಯ ಸೌಲಭ್ಯವಿದೆ ಎಂದಹಾಗಾಯಿತು. ಇನ್ನುಳಿದ
ರಷ್ಟು ಪ್ರದೇಶದಲ್ಲಿ ಬೆಳೆ ಬೆಳೆಯಲು ಮಳೆಯ ನೀರೇ ಆಧಾರ.

ವ್ಯವಸಾಯದಲ್ಲಿ ಮಳೆ-ಬೆಳೆಯ ಸಂಬಂಧ ಇಂದು ನಿನ್ನೆಯದಲ್ಲ ; ಈ
ಅನಾದಿಕಾಲದಿಂದಲೂ ಕೂಡಿಬಂದದ್ದು. ಆದಾಗ್ಯೂ, ಅದರ ಮಹತ್ವವನ್ನು
ಇಂದಿಗೂ ಕೂಡಾ ಸರಿಯಾಗಿ ಮನವರಿಕೆ ಮಾಡಿಕೊಂಡಂತಿಲ್ಲ. ಇತ್ತೀಚಿನ
ಗಳಲ್ಲಿ ಪವನಶಾಸ್ತ್ರದಲ್ಲಿಯೂ ಕೂಡಾ ಸಾಕಷ್ಟು ಸುಧಾರಣೆಗಳಾಗಿದ್ದರೂ,
ಸಾಯಕ್ಕೆ ಅತ್ಯಗತ್ಯವೆನಿಸಿರುವ ಹವಾಮಾನಕ್ಕೆ ಸಂಬಂಧಿಸಿದ ವಿಚಾರಗಳು
ನಿರೀಕ್ಷಿತ ಪ್ರಮಾಣದಲ್ಲಿ ಇನ್ನೂ ಮುಟ್ಟಿಲ್ಲ. ಲಭ್ಯವಿರುವ ಮಾಹಿತಿಯನ್ನು
ದಲ್ಲಿ ರೈತನಿಗೆ ಒದಗಿಸಿದಾಗ, ಅದರಿಂದ ವ್ಯವಸಾಯದಲ್ಲಿ ಅನುಕೂಲಕಾರ
ಲಾಫಣೆಗಳನ್ನು ಮಾಡಿಕೊಳ್ಳಲು ಅವನಿಗೆ ಸಹಾಯಕವಾಗುತ್ತದೆ.

ಉತ್ತಮ ಬೆಳೆ ಬೆಳೆಯಲು ಸಹಕಾರಿಯೆನಿಸುವ ಹಲವಾರು ಅ
ಪ್ರಮುಖವೆನಿಸುವ ಮಳೆಯ ಬಗ್ಗೆ ಮಾತ್ರ ಚರ್ಚಿಸುವುದು ಈ ಲೇಖನದ

ತುಮಕೂರು ಜಿಲ್ಲೆಯ ಹತ್ತು ತಾಲ್ಲೂಕುಗಳಲ್ಲಿ ಒಟ್ಟು ಅರವತ್ತಾರು ವೃಷ್ಟಿಮಾಪಕಗಳನ್ನು ಸ್ಥಾಪಿಸಲಾಗಿದೆ. ಇಲ್ಲಿ ದಾಖಲಾಗುವ ಮಳೆಯ ಮಾಹಿತಿಯನ್ನು ಪುಣೆಯಲ್ಲಿರುವ ಕೇಂದ್ರ ಹವಾಮಾನ ವೀಕ್ಷಣಾಲಯದವರು ತರಿಸಿಕೊಂಡು, ಅದನ್ನು ಆಯಾ ಪ್ರದೇಶಗಳಲ್ಲಿ ವ್ಯವಸಾಯ ಕಾರ್ಯಕ್ರಮದಲ್ಲಿ ಅಳವಡಿಸಿಕೊಳ್ಳಲು ಅನುವಾಗುವಂತೆ ಸೂಕ್ತರೀತಿಯಲ್ಲಿ ವಿಶ್ಲೇಷಿಸುತ್ತಾರೆ. ಮಧುಗಿರಿಯನ್ನು ಬಿಟ್ಟು ಉಳಿದ 9 ತಾಲ್ಲೂಕುಗಳಲ್ಲಿ ಬಿದ್ದ ಮಳೆಯ ಮಾಹಿತಿ ಲಭ್ಯವಿದೆ. 1921 ರಿಂದ 1970 ರವರೆಗಿನ 50 ವರ್ಷಗಳಲ್ಲಿ ಬಿದ್ದ ಸರಾಸರಿ ಮಳೆಯ ಪ್ರಮಾಣವನ್ನು ಲೆಕ್ಕಹಾಕಲಾಗಿದೆ. ಅದರ ಆಧಾರದ ಮೇಲೆ, ತುಮಕೂರು ಜಿಲ್ಲೆಯ ವಿವಿಧ ತಾಲ್ಲೂಕು (ಮಧುಗಿರಿಯನ್ನು ಬಿಟ್ಟು) ಗಳಲ್ಲಿ ಏಪ್ರಿಲ್ ತಿಂಗಳಿನಲ್ಲಿ ಬೀಳಬಹುದಾದ ಸರಾಸರಿ ಮಳೆಯನ್ನು ಈ ಕೆಳಗಿನ ಪಟ್ಟಿಯಲ್ಲಿ ಕೊಡಲಾಗಿದೆ.

(ಮಳೆಯ ಪ್ರಮಾಣ ಮಿಲಿಮೀಟರ್‌ಗಳಲ್ಲಿ)

| | | ತಾಲ್ಲೂಕುಗಳು | | | | | | | | | |
|---|---|---|---|---|---|---|---|---|---|---|---|
| ಸ್ಟಾಂಡರ್ಡ್ ವಾರಗಳ ಸಂಖ್ಯೆ | ತಾರೀಖು | ಚಿಕ್ಕನಾಯಕನಹಳ್ಳಿ | ಗುಬ್ಬಿ | ಕೊರಟಗೆರೆ | ಕುಣಿಗಲ್ | ಪಾವಗಡ | ಶಿರಾ | ತಿಪಟೂರು | ತುಮಕೂರು | ತುರುವೇಕೆರೆ | ಜಿಲ್ಲಾ ಸರಾಸರಿ |
| 14 | 2-8 | 09.4 | 04.5 | 03.7 | 04.8 | 02.1 | 05.3 | 05.1 | 06.6 | 05.1 | 05.2 |
| 15 | 9-15 | 07.8 | 09.0 | 06.8 | 08.5 | 04.0 | 05.1 | 08.1 | 11.5 | 11.6 | 08.1 |
| 16 | 16-22 | 14.7 | 10.2 | 06.6 | 13.2 | 09.1 | 06.4 | 13.0 | 11.1 | 11.8 | 10.6 |
| 17 | 23-29 | 13.8 | 13.0 | 07.8 | 12.3 | 04.4 | 07.1 | 14.5 | 10.4 | 15.1 | 10.9 |
| ಏಪ್ರಿಲ್ ತಿಂಗಳ ಒಟ್ಟು | | 45.7, | 36.7 | 24.9, | 38.8 | 19.6 | 23.9 | 41.0 | 39.6 | 43.6 | 34.8 |
| ವಾರ್ಷಿಕ ಸರಾಸರಿ | | 671.1, | 749.3, | 617.6, | 767.2, | 543.1 | 522.4 | 628.0 | 867.7, | 690.2 | 673.9 |
| ವಾರ್ಷಿಕ ಮಳೆಯ ದಿನಗಳು | | 7.3 | 5.1 | 4.2 | 5.3 | 3.7 | 4.8 | 7.0 | 4.8 | 6.7 | 5.4 |

ಸೂಚನೆ : 1) ಸ್ಟ್ಯಾಂಡರ್ಡ್ ವಾರಗಳನ್ನು ಜನವರಿ ಒಂದನೇ ತಾರೀಖಿನಿಂದ ಪ್ರಾರಂಭಿಸಿ, ಪ್ರತಿ ಏಳು ದಿನಗಳಿಗೆ ಒಂದು ವಾರದಂತೆ ಲೆಕ್ಕ ಹಾಕಲಾಗಿದೆ.

2) ಮಧುಗಿರಿ ತಾಲ್ಲೂಕಿನ ಬಗ್ಗೆ ಮಾಹಿತಿಯು ಲಭ್ಯವಿಲ್ಲ.

ತಿಂಗಳಿನಲ್ಲಿ ಬರುವ ದಿನಗಳನ್ನು ಏಳು ದಿವಸಗಳಿಗೊಂದರಂತೆ ನಾಲ್ಕು ವಾರಗಳಾಗಿ ವಿಂಗಡಿಸಿ, ಆಯಾ ವಾರಗಳಲ್ಲಿ ಬೀಳಬಹುದಾದ ಮಳೆಯ ಪ್ರಮಾಣವನ್ನು ನಮೂದಿಸಲಾಗಿದೆ. ವ್ಯವಸಾಯದಲ್ಲಿ ವಿವಿಧ ಕಾರ್ಯಕ್ರಮಗಳನ್ನು ಕೈಗೊಳ್ಳಲು ರೈತರಿಗೆ ಇದರಿಂದ ಹೆಚ್ಚು ಪ್ರಯೋಜನವಾಗುತ್ತದೆ.

ಮೊದಲನೆಯ ವಾರದಲ್ಲಿ : ಏಪ್ರಿಲ್ ತಿಂಗಳ ಮೊದಲನೇ ವಾರದಲ್ಲಿ ಜಿಲ್ಲೆಯಲ್ಲಿ ಬೀಳಬಹುದಾದ ಸರಾಸರಿ ಮಳೆಯ ಪ್ರಮಾಣವು 05.2 ಮಿ.ಮೀ. ಗಳಾಗಿದ್ದರೆ, ಚಿಕ್ಕನಾಯಕನಹಳ್ಳಿ, ಸಿರಾ ಮತ್ತು ತುಮಕೂರು ತಾಲ್ಲೂಕುಗಳನ್ನುಳಿದು ಮಿಕ್ಕೆಲ್ಲಾ ತಾಲ್ಲೂಕುಗಳಲ್ಲಿ ಬೀಳುವ ಮಳೆಯು ಜಿಲ್ಲಾ ಸರಾಸರಿಗಿಂತ ಕಡಿಮೆಯಾಗಿರುವುದು. ಈ ವಾರದಲ್ಲಿ 09.5 ಮಿ.ಮೀ. ನಷ್ಟು ಗರಿಷ್ಠ ಮಳೆ ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ ಮತ್ತು 02.1 ಮಿ.ಮೀ. ನಷ್ಟು ಕನಿಷ್ಠ ಮಳೆ ಪಾವಗಡ ತಾಲ್ಲೂಕಿನಲ್ಲಿಯೂ ಆಗುವುದು.

ಎರಡನೇ ವಾರದಲ್ಲಿ : ಈ ವಾರದಲ್ಲಿ ಅತ್ಯಂತ ಕಡಿಮೆ ಮಳೆಯು (04.0 ಮಿ.ಮೀ.) ಪಾವಗಡ ತಾಲ್ಲೂಕಿನಲ್ಲಿಯೂ ಹಾಗೂ ಅತ್ಯಂತ ಹೆಚ್ಚುಮಳೆ (11.6 ಮಿ.ಮೀ.) ತುರುವೇಕೆರೆ ತಾಲ್ಲೂಕಿನಲ್ಲಿಯೂ ಬೀಳುವುದು. ಜಿಲ್ಲೆಯ ಸರಾಸರಿ ಪ್ರಮಾಣವು 08.1 ಮಿ.ಮೀ. ಆಗುತ್ತದೆ. ಅಂದರೆ ಕೊರಟಗೆರೆ, ಪಾವಗಡ ಮತ್ತು ಸಿರಾ ತಾಲ್ಲೂಕುಗಳಲ್ಲಿ ಸರಾಸರಿಗಿಂತ ಕಡಿಮೆ ಮಳೆಯೂ ಮತ್ತು ಉಳಿದ ತಾಲ್ಲೂಕುಗಳಲ್ಲಿ ಅಧಿಕ ಮಳೆಯೂ ಆಗುವುದು.

ಮೂರನೇ ವಾರದಲ್ಲಿ : ಮೊದಲೆರಡು ವಾರಗಳಿಗೆ ಹೋಲಿಸಿದಲ್ಲಿ, ಮೂರನೇ ವಾರದಲ್ಲಿ ಬೀಳುವ ಮಳೆಯ ಪ್ರಮಾಣವು ಹೆಚ್ಚಾಗಿರುವುದು. ಈ ವಾರದಲ್ಲಿ ಬೀಳಬಹುದಾದ ಜಿಲ್ಲೆಯ ಸರಾಸರಿ ಮಳೆಯ ಪ್ರಮಾಣವು 10.6 ಮಿ.ಮೀ. ಗಳಾದರೆ, ಗುಬ್ಬಿ, ಕೊರಟಗೆರೆ, ಪಾವಗಡ ಮತ್ತು ಸಿರಾ ತಾಲ್ಲೂಕುಗಳಲ್ಲಿ ಅದಕ್ಕಿಂತ ಕಡಿಮೆಯಾಗಿಯೂ ಹಾಗೂ ಉಳಿದ ತಾಲ್ಲೂಕುಗಳಲ್ಲಿ ಹೆಚ್ಚಾಗಿಯೂ ಬೀಳುವುದು. ಈ ವಾರದಲ್ಲಿ ಗರಿಷ್ಠ ಮಳೆ (14.7 ಮಿ.ಮೀ.) ಚಿಕ್ಕನಾಯಕನಹಳ್ಳಿಯಲ್ಲಿ ಹಾಗೂ ಕನಿಷ್ಠ (06.4 ಮಿ.ಮೀ.) ಮಳೆಯು ಸಿರಾ ತಾಲ್ಲೂಕಿನಲ್ಲಿಯೂ ಆಗುವುದು.

ನಾಲ್ಕನೇ ವಾರದಲ್ಲಿ : ಈ ವಾರದಲ್ಲಿ ಬೀಳುವ ಮಳೆಯ ಪ್ರಮಾಣವು ಇನ್ನೂ ಉತ್ತಮವಾಗಿರುತ್ತದೆ. ಅತಿ ಕಡಿಮೆ ಮಳೆ (04.4 ಮಿ.ಮೀ.) ಪಾವಗಡ ತಾಲ್ಲೂಕಿನಲ್ಲಿ ಮತ್ತು ಅತಿ ಹೆಚ್ಚು ಮಳೆ (15.1 ಮಿ.ಮೀ.) ತುರುವೇಕೆರೆ ತಾಲ್ಲೂಕಿನಲ್ಲಿ ಬೀಳುವುದು ದಾಖಲೆಗಳಿಂದ ತಿಳಿದುಬಂದಿದೆ. ಈ ವಾರದಲ್ಲಿ ಆಗುವ ಜಿಲ್ಲೆಯ ಸರಾಸರಿ ಮಳೆಯ ಪ್ರಮಾಣವು 10.9 ಮಿ.ಮೀ. ಇದಕ್ಕಿಂತಲೂ ಕಡಿಮೆ ಮಳೆಯಾಗುವ ತಾಲ್ಲೂಕುಗಳೆಂದರೆ, ಕೊರಟಗೆರೆ, ಪಾವಗಡ, ಸಿರಾ ಮತ್ತು ತುಮಕೂರು. ಉಳಿದ ತಾಲ್ಲೂಕುಗಳಲ್ಲಿ ಸರಾಸರಿಗಿಂತ ಹೆಚ್ಚು ವೃಷ್ಟಿಗರೆಯುತ್ತದೆ.

ಏಪ್ರಿಲ್ ತಿಂಗಳಿನಲ್ಲಿ ಬೀಳಬಹುದಾದ ಸರಾಸರಿ ಒಟ್ಟು ಮಳೆಯ ಪ್ರಮಾಣವನ್ನು ಗಣನೆಗೆ ತೆಗೆದುಕೊಂಡರೆ, ಈ ತಿಂಗಳಿನಲ್ಲಿ ಅತಿ ಹೆಚ್ಚು ಮಳೆಯನ್ನು (45.7 ಮಿ. ಮೀ.) ಪಡೆಯುವ ಸೌಭಾಗ್ಯವನ್ನು ಚಿಕ್ಕನಾಯಕನಹಳ್ಳಿ ತಾಲ್ಲೂಕು ಗಳಿಸಿಕೊಂಡಿದೆ. ಅತಿ ಕಡಿಮೆ ಮಳೆಯನ್ನು (19.6 ಮಿ. ಮೀ.) ಪಡೆಯುವ ದೌರ್ಭಾಗ್ಯ ಪಾವಗಡ ತಾಲ್ಲೂಕಿನದು. ಜಿಲ್ಲೆಯ ಸರಾಸರಿ 34.8 ಮಿ. ಮೀ. ಕೊರಟಗೆರೆ, ಪಾವಗಡ ಮತ್ತು ಸಿರಾ ತಾಲ್ಲೂಕುಗಳನ್ನು ಬಿಟ್ಟರೆ ಉಳಿದೆಲ್ಲಾ ತಾಲ್ಲೂಕುಗಳಲ್ಲಿ ಸರಾಸರಿಗಿಂತ ಹೆಚ್ಚು ಮಳೆಯಾಗುವುದು ಕಂಡುಬಂದಿದೆ.

ತುಮಕೂರು ಜಿಲ್ಲೆಯ ವಾರ್ಷಿಕ ಸರಾಸರಿ ಮಳೆ 673.0 ಮಿ. ಮೀ. ಈ ಪ್ರಮಾಣವು ವಿವಿಧ ತಾಲ್ಲೂಕುಗಳಲ್ಲಿ 522.4 ರಿಂದ 867.7 ಮಿ.ಮೀ. ವರೆಗೆ ವ್ಯತ್ಯಾಸ ಹೊಂದುತ್ತದೆ. ಹಾಗೆಯೇ ಏಪ್ರಿಲ್ ತಿಂಗಳಿನಲ್ಲಿ ಬೀಳುವ ಮಳೆಯ ಪ್ರಮಾಣವು ವಾರ್ಷಿಕ ಮಳೆಯ ಪ್ರಮಾಣದ ಶೇ. 3.7 ರಿಂದ 7.3 ರವರೆಗೆ ವಿವಿಧ ತಾಲ್ಲೂಕುಗಳಲ್ಲಿ ಬೀಳುವುದು ಕಂಡುಬರುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ, ಈ ತಿಂಗಳಿನಲ್ಲಿ 25 ಮಿ. ಮೀ. ಗಿಂತ ಕಡಿಮೆ ಮಳೆಯಾಗುವ ತಾಲ್ಲೂಕುಗಳೆಂದರೆ ಕೊರಟಗೆರೆ, ಪಾವಗಡ ಮತ್ತು ಸಿರಾ, ಉಳಿದ ತಾಲ್ಲೂಕುಗಳು 35 ಮಿ. ಮೀ. ಗಿಂತಲೂ ಹೆಚ್ಚು ಮಳೆಯನ್ನು ಸ್ವೀಕರಿಸುತ್ತವೆ.

ಮಳೆ ಮತ್ತು ಬೇಸಾಯದ ಕೆಲಸಗಳು :

ತುಮಕೂರು ಜಿಲ್ಲೆಯ ಸಾಗುವಳಿ ಯೋಗ್ಯ ಪ್ರದೇಶದ ಬಹುಭಾಗ ಖುಷ್ಕಿಯಾಗಿದ್ದು, ಅದರಲ್ಲಿ ಬೆಳೆ ತೆಗೆಯಲು ರೈತರು ಮಳೆಯನ್ನೇ ಅವಲಂಬಿಸಬೇಕಾಗಿದೆ. ಈ ಭಾಗದಲ್ಲಿ ಮುಂಗಾರು ಬಿತ್ತನೆ ಪ್ರಾರಂಭವಾಗುವುದು ಸಾಮಾನ್ಯವಾಗಿ ಜೂನ್ ತಿಂಗಳ ನಂತರವೇ. ಇದಕ್ಕೆ ಮುನ್ನ ಪೂರ್ವ ಮುಂಗಾರು (Pre-monsoon) ಮಳೆಯಾಗುವುದಾದರೂ, ಬಹುಪಾಲು ರೈತರು ಇದರ ಪೂರ್ಣ ಪ್ರಯೋಜನವನ್ನು ಮಾಡಿಕೊಳ್ಳುವುದಿಲ್ಲ. ಕೊನೆಯ ಪಕ್ಷ ಈ ಅವಧಿಯಲ್ಲಿ ಬೀಳುವ ಮಳೆಯ ನೀರನ್ನು

ಜಮೀನು ಹದಮಾಡುವುದಕ್ಕಾದರೂ ಉಪಯೋಗಿಸಿಕೊಂಡಲ್ಲಿ ಮುಂಗಾರು ಬಿತ್ತ ಯನ್ನು ಸಕಾಲದಲ್ಲಿ ಮಾಡಲು ಸಾಧ್ಯವಾಗುತ್ತದೆ. ಆದರೆ, ಈ ರೀತಿ ಮಾಡ್ಲ ರೈತರಿಗೆ ತಮ್ಮ ಭೂ ಭಾಗದಲ್ಲಿ ಆಯಾಯ ಕಾಲದಲ್ಲಿ ಬೀಳಬಹುದಾದ ಮಳೆ ಬಗ್ಗೆ ಖಚಿತ ತಿಳುವಳಿಕೆಯಿರಬೇಕು. ಆಗ ಮಾತ್ರ ಅವರಿಗೆ ತಮ್ಮ ಬೇಸಾಯ ಕೆಲಸಗಳನ್ನು ಕ್ರಮಬದ್ಧವಾಗಿ ಮಾಡಲು ಸಾಧ್ಯವಾಗುತ್ತದೆ.

ಏಪ್ರಿಲ್ ತಿಂಗಳಿನಲ್ಲಿ ಬೀಳುವ ಮಳೆಗಳು :

| | | |
|---|---|---|
| ರೇವತಿ ಮಳೆ | ಮಾರ್ಚಿ 31 ರಿಂದ | ಏಪ್ರಿಲ್ 13 ರವರೆ |
| ಅಶ್ವಿನಿ ಮಳೆ | ಏಪ್ರಿಲ್ 14 ರಿಂದ | ಏಪ್ರಿಲ್ 26 ರವರೆ |
| ಭರಣಿ ಮಳೆ | ಏಪ್ರಿಲ್ 27 ರಿಂದ | ಮೇ 10 ರವರೆ |

ಯಾವ ಮಳೆ, ಯಾವ ಭಾಗದಲ್ಲಿ ಎಷ್ಟು ವೃಷ್ಟಿಯನ್ನು ಸುರಿಸುತ್ತವೆ ಎಂದ ಖಚಿತವಾಗಿ ಹೇಳಲಿಕ್ಕಾಗದು. ಇದು ವರ್ಷದಿಂದ ವರ್ಷಕ್ಕೆ, ಪ್ರದೇಶದಿಂ ಪ್ರದೇಶಕ್ಕೆ ವೆತ್ಯಾಸವಾಗುತ್ತಿರುತ್ತದೆ. ಆದಾಗ್ಯೂ, ಈ ಮಳೆಗಳು ಅಲ್ಲಲ್ಲಿ ವೃಷ್ಟಿ ಗರೆಯುತ್ತವೆಂಬುದು ದಿಟ. ಈ ರೀತಿ ಬೀಳುವ ಮಳೆಯ ನೀರನ್ನು ರೈತರ ಆರಂಭದ ಕೆಲಸಗಳಿಗೆ ಲಾಭದಾಯಕವಾಗಿ ಉಪಯೋಗಿಸಿಕೊಳ್ಳಬಹುದು.

**ಏಪ್ರಿಲ್ ತಿಂಗಳಿನಲ್ಲಿ ಕೈಗೊಳ್ಳಬಹುದಾದ ಮುಖ್ಯ ಕೃಷಿ ಕಾರ್ಯಕ್ರಮಗಳು**

ಅ) **ಮಾಗಿ ಉಳುಮೆ :** ಒಣ ಬೇಸಾಯದಲ್ಲಿ ಬೆಳೆಗಳನ್ನು ನವಂಬರ್-ಡಿಸೆಂಬರ್ ತಿಂಗಳಿನಲ್ಲಿ ಕೊಯಿಲು ಮಾಡಿದ ನಂತರ, ಬಹಳಷ್ಟು ರೈತರು ಜಮೀನನ್ನು ಉಳುಮೆ ಮಾಡದೆ ಹಾಗೆಯೇ ಬಿಟ್ಟಿರುವುದನ್ನು ಕಾಣುತ್ತೇವೆ. ಏಪ್ರಿಲ್ ತಿಂಗಳಿನಲ್ಲಿ ಪೂರ್ವ ಮುಂಗಾರು ಬಿದ್ದಕೂಡಲೇ ಭೂಮಿಯನ್ನು ಕಬ್ಬಿಣದ ನೇಗಿಲಿನಿಂದ ಆಳ ವಾಗಿ ಮಾಗಿ ಉಳುಮೆ ಮಾಡುವುದರಿಂದ ಹಲವಾರು ಲಾಭಗಳಿವೆ.

1. ಮಾಗಿ ಉಳುಮೆಯಿಂದ ಕೊಳೆ, ಕಸ-ಕಡ್ಡಿಗಳೆಲ್ಲಾ ಮಣ್ಣಿನೊಳಗೆ ಸೇರಿ ಕೊಳೆತು ಗೊಬ್ಬರವಾಗುತ್ತವೆ.
2. ಉಳುಮೆಯ ದೆಸೆಯಿಂದ ಬೆಳೆಯುತ್ತಿರುವ ಕಳೆಗಿಡಗಳೆಲ್ಲಾ ನಾಶವಾಗಿ, ಅವು ಭೂಮಿಯಿಂದ ಪೋಷಕಾಂಶಗಳನ್ನು ಹೀರುವುದು ತಪ್ಪಿ, ಮಣ್ಣಿನ ಫಲವತ್ತು ಉಳಿಯುತ್ತದೆ.
3. ಕೀಟಗಳ ಮೊಟ್ಟೆ, ಕೋಶ ಇತ್ಯಾದಿಗಳು ಮಣ್ಣಿನಲ್ಲಿ ಮುಚ್ಚಿಹೋಗುವುದ ರಿಂದ ಅವುಗಳ ಸಂತಾನವೃದ್ಧಿ ಕುಂಠಿತವಾಗುತ್ತದೆ.

4. ಮಣ್ಣು ಹುಡಿಯಾಗುವುದರಿಂದ ಗಾಳಿಯು ಮಣ್ಣಿನಲ್ಲಿ ಸರಾಗವಾಗಿ ಸಂಚರಿಸಲು ಅನುಕೂಲವಾಗುತ್ತದೆ.

5. ಮಾಗಿಯ ಮಣ್ಣಿನೊಳಗೆ ಸಸ್ಯ ಮತ್ತು ಕೀಟಗಳ ಅವಶೇಷಗಳು ಸೇರಿ ಹೋಗಿ, ರಸಾಯನಿಕ ಬದಲಾವಣೆಗಳುಂಟಾಗಿ ಮಣ್ಣಿನ ರಚನೆಯೂ ಕೂಡ ಕೆಲಮಟ್ಟಿಗೆ ಬದಲಾಗುತ್ತದೆ.

6. ಮಣ್ಣು ಹುಡಿಯಾಗಿ ಮತ್ತು ಸಡಿಲವಾಗಿರುವುದರಿಂದ ಬಿದ್ದ ಮಳೆಯ ನೀರಿನ ಬಹುಭಾಗ ಮಣ್ಣಿನೊಳಗೆ ಇಂಗಿಹೋಗಿ, ಭೂಮಿಯಲ್ಲಿನ ತೇವಾಂಶದ ಪ್ರಮಾಣ ಹೆಚ್ಚುತ್ತದೆ.

7. ಬಿರುಮಳೆ ಬಂದಾಗಲೂ ಸಹ ಮಣ್ಣಿನ ಸವಕಳಿ ಕಡಿಮೆಯಾಗುತ್ತದೆ.

ಒಟ್ಟನಲ್ಲಿ ಹೇಳುವುದಾದರೆ ಅತಿ ಕಡಿಮೆ ವೆಚ್ಚದಲ್ಲಿ ಭೂಮಿಯ ಫಲವತ್ತು ಗಣನೀಯವಾಗಿ ಹೆಚ್ಚುತ್ತದೆ. ಅಂತೆಯೇ ಬಡವನು ಮಾಗಿ ಉಳುಮೆ, ಶ್ರೀಮಂತನ ಗೊಬ್ಬರ-ಎರಡೂ ಸಮ, ಎನ್ನುವ ಹಿರಿಯರ ಅನುಭವ ವಾಣಿ ಸಾರ್ವಕಾಲಿಕ ಸತ್ಯ!

**ಆ) ಗೊಣ್ಣೆಹುಳುಗಳ ಹತೋಟಿ :** ಗೊಣ್ಣೆಹುಳು ಬಾಧೆಯಿರುವ ಪ್ರದೇಶಗಳಲ್ಲಿ ಏಪ್ರಿಲ್ ತಿಂಗಳಿನಲ್ಲಿ ಬೀಳುವ ಮಳೆಯನ್ನು ಅವುಗಳನ್ನು ಹತೋಟಿಮಾಡಲು ರೈತರು ಉಪಯೋಗಿಸಿಕೊಳ್ಳಬಹುದು.

1. ಮುಂಗಾರು ಮೊದಲ ಮಳೆ ಬಿದ್ದ ಸಂಜೆ ಹುಳುಗಳು ಮಣ್ಣಿನಿಂದ ಹೊರ ಬರುವುದರಿಂದ, ಪೆಟ್ರೋಮ್ಯಾಕ್ಸ್ ದೀಪದ ಸಹಾಯದಿಂದ ಅವುಗಳನ್ನು ಹಿಡಿದು ನಾಶಪಡಿಸಬಹುದು.

2. ಜಮೀನನ್ನು ಹಲವುಬಾರಿ ಆಳವಾಗಿ ಉಳುಮೆಮಾಡುವುದರಿಂದ, ಹುಳುಗಳ ಸಂತಾನವನ್ನು ಮಿತಿಗೊಳಿಸಬಹುದು.

3. ಎಕರೆಗೆ 10 ಕೆ.ಜಿ. ಶೇ. 10 ರ ಫೋರೆಟ್ ಅಥವಾ 12 ಕೆ.ಜಿ. ಶೇ. 5 ರ ಡೈಸಿಸ್ಟಾನ್ ಅಥವಾ 10 ಕೆ. ಜಿ. ಶೇ. 3 ರ ಫ್ಯೂರಡಾನ್ ಅಥವಾ 10 ಕೆ. ಜಿ. ಶೇ. 5 ರ ಎಕಾಲುಕ್ಸ್ ಹರಳುಗಳನ್ನು ಮಣ್ಣಿಗೆ ಸೇರಿಸಿ ಉಳುಮೆ ಮಾಡುವುದರಿಂದ ಪರಿಣಾಮಕಾರಿಯಾಗಿ ಹತೋಟಿ ಮಾಡಬಹುದು.

**ಇ) ಖುಷ್ಕಿಯಲ್ಲಿ ಎರಡು ಬೆಳೆ :** ಸಾಮಾನ್ಯವಾಗಿ ಖುಷ್ಕಿಯಲ್ಲಿ ಒಂದು ಬೆಳೆ ತೆಗೆದುಕೊಳ್ಳುವುದು ರೂಢಿ, ಲಭ್ಯವಿರುವ ಮಳೆಯ ನೀರನ್ನು ಸದುಪಯೋಗಮಾಡಿಕೊಂಡರೆ, ಖುಷ್ಕಿಯಲ್ಲಿ ಎರಡು ಬೆಳೆಗಳನ್ನು ಲಾಭದಾಯಕವಾಗಿ ಬೆಳೆಯಲು

ಸಾಧ್ಯವೆಂದು ಇತ್ತೀಚಿನ ಸಂಶೋಧನೆಗಳು ಸ್ಪಷ್ಟಪಡಿಸಿವೆ. ಈ ಪದ್ಧತಿಯಲ್ಲಿ ಮೊದಲನೆಯ ಬೆಳೆಯಾಗಿ ಅಲಸಂದೆ ಮತ್ತು ಎರಡನೆಯ ಬೆಳೆಯಾಗಿ ರಾಗಿಯನ್ನು ಬೆಳೆಯುವುದು ಹೆಚ್ಚು ಲಾಭದಾಯಕವೆಂದು ಕಂಡು ಬಂದಿದೆ. ಅಲಸಂದೆ ಬೆಳೆಯನ್ನು ಮೇ ತಿಂಗಳಿನಲ್ಲಿ ಬಿತ್ತಬೇಕಾಗುವುದರಿಂದ, ಜಮೀನನ್ನು ಏಪ್ರಿಲ್ ತಿಂಗಳಿನಲ್ಲಿಯೇ ಹದಮಾಡ ಬೇಕಾಗುವುದು.

ಈ) ಸಕಾಲಿಕ ಮುಂಗಾರು ಬಿತ್ತನೆ : ಇತರೆ ಮುಂಗಾರು ಬೆಳೆಗಳನ್ನು ಸಕಾಲದಲ್ಲಿ ಬಿತ್ತಬೇಕಾದರೆ, ರೈತರು ಏಪ್ರಿಲ್ ತಿಂಗಳಿನಲ್ಲಿ ಬೀಳುವ ಮಳೆಯ ನೀರನ್ನು ಉಪಯೋಗಿಸಿಕೊಂಡು ಜಮೀನನ್ನು ಬಿತ್ತನೆಗೆ ಸಿದ್ಧಪಡಿಸಬೇಕು.

ಆರಂಭಗಾರ (ರೈತ) ನಿಗೆ ಹವಾಮಾನದ ಬಗ್ಗೆ ಖಚಿತ ತಿಳುವಳಿಕೆ ಇದ್ದಾಗ ಮಾತ್ರ ವಿವಿಧ ಬೆಳೆಗಳನ್ನು ಸಕಾಲಿಕವಾಗಿ ಬಿತ್ತನೆ ಮಾಡುವುದರ ಮೂಲಕ ಅಧಿಕ ಇಳುವರಿಯನ್ನು ಪಡೆಯಲು ಸಾಧ್ಯ. ರೈತರು ಈ ಕಡೆಗೆ ಅಗತ್ಯ ಗಮನ ಹರಿಸಬೇಕಾಗಿದೆ.

# ‘ಸ್ಫೂರ್ತಿ ಜ್ಯೋತಿ’

ಇಬ್ಬರು ಮೂವರು ದೇವರೆಂದು ಉಬ್ಬಿಬ್ಬಿ ಮಾತನಾಡಬೇಡ ದೇವನೊಬ್ಬ ಕಾಣಿರೋ. —ಬಸವಣ್ಣ

ದೇವರ ಸೃಷ್ಟಿಯಲ್ಲಿ ಮನುಷ್ಯ ಮಾತ್ರನೇ ಬಡವ. —ಎಮರ್ಸನ್

ತಾಯಿಯು ಹಾಲು ನಂಜಾಗಿ ಕೊಟ್ಟರೆ ಇನ್ನಾರಿಗೆ ದೂರುವೆ ಕೂಡಲ ಸಂಗಮ ದೇವ.. —ಬಸವಣ್ಣ

ಮತಕ್ಕೆ ಹೊಸದಾಗಿ ಸೇರಿದವನ ಉತ್ಸಾಹ ಅದರಲ್ಲಿಯೇ ಹುಟ್ಟಿದವನಿಗಿಂತ ಹೆಚ್ಚಾಗಿರುತ್ತದೆ. —ಗಾಂಧೀಜಿ

ದಡ್ಡ ದೂರದಲ್ಲಿ ಸುಖ ಹುಡುಕಿದರೆ, ಬುದ್ಧಿವಂತನ ಕಾಲ ಕೆಳಗಡೆಯೇ ಸುಖ ಇರುತ್ತದೆ. —ಜೇಮ್ಸ್ ಜಹನ್‌ಹೀಂ

ಬೇವನ್ನು ಬೆಲ್ಲದೊಳಿಡುವುದರಿಂದ, ಹಾವಿಗೆ ಹಾಲೆರೆಯುವುದರಿಂದ ಏನೂ ಪ್ರಯೋಜನವಿಲ್ಲ. —ಪುರಂದರ ದಾಸರು

ನಡೆವುದೊಂದೇ ಭೂಮಿ, ಕುಡಿವುದೊಂದೇ ನೀರು, ಸುಡುವಗ್ನಿಯೊಂದೇ ಇರುತಿರಲು ಕುಲಗೋತ್ರ ನಡುವೆ ಎತ್ತಣದು ? —ಸರ್ವಜ್ಞ

ಪುರುಷನನ್ನು ಸಭ್ಯನಾಗಿ ವರ್ತಿಸುವಂತೆ ಮಾಡುವ ಹೆಣ್ಣೇ ಕುಲೀನ ಮಹಿಳೆ. —ರಸೆಲ್ ಲೈನ್ಸ್

ನಾವು ನಿಗ್ರಹಿಸಬೇಕಾದುದು ಮೂರನ್ನು ನಾಲಿಗೆ, ನಡತೆ ಮತ್ತು ಸಿಟ್ಟು. —ಅನುಭವವಾಣಿ

ಹೆಚ್ಚು ಓದಿದಂತೆಲ್ಲ ನಮ್ಮ ಅಜ್ಞಾನವನ್ನು ಹೆಚ್ಚೆಚ್ಚು ಅರಿಯುತ್ತೇವೆ —ಶೆಲ್ಲಿ

ಸಾವಿನ ಕ್ರೌರ್ಯವನ್ನು ನಾವು ಅರಿಯುವುದು ಕೇವಲ ಅದು ನಮ್ಮ ಅತ್ಯಂತ ಪ್ರೀತಿ ಪಾತ್ರರ ಮೇಲೆ ಕೈಹಾಕಿದಾಗ. —ಮೇಡಂ ಡಿ. ಸ್ಟೇಲ್

# ರೂಹಿಲ್ಲದ ಚೆಲುವ

— ಸ. ಮುನಿಸ್ವಾಮಿ

'ಸಾವಿಲ್ಲದ ರೂಹಿಲ್ಲದ ಚೆಲುವಂಗೆ ನಾನೊಲಿದೆ, ಎನ್ನುವುದು ಅಕ್ಕಮಹಾದೇವಿಯ ಅಮರವಾಣಿ ರೂಹಿಲ್ಲದ (ರೂಪವಿಲ್ಲದ) ಚೆಲುವು ಯಾವುದು? ಇದೊಂದು ಸಂಶಯಾತ್ಮಕ ಪ್ರಶ್ನೆ. ಯಾವ ವಸ್ತುವಿಗೆ ರೂಪವಿದೆಯೋ ಆ ವಸ್ತುವನ್ನು ಮಾತ್ರ ನಾವು ಕಣ್ಣಿನಿಂದ ನೋಡಿ ಅದು ಕುರೂಪವೆಂದೋ ಅಥವಾ ಸುರೂಪವೆಂದೋ ನಿರ್ಧರಿಸಬಹುದು. ರೂಪವಿಲ್ಲದ ವಸ್ತುವಿಗೆ ಕುರೂಪವಾಗಲಿ ಅಥವಾ ಸುರೂಪವಾಗಲಿ ಹೇಗೆ ಬರಬೇಕು? ಅಂಥ ಭಕ್ತಿಯುಲ್ಮಾದದಲ್ಲಿ ಅಕ್ಕ ಈ ರೀತಿ ನುಡಿದಳೇ. ಯಾವ ವಸ್ತುವಿಗೆ ರೂಪವುಂಟೋ ಅದು ಒಂದಲ್ಲ ಒಂದು ದಿನ ವಿಕಾರ ಹೊಂದಲೇ ಬೇಕು; ಮತ್ತು ವಿನಾಶ ಹೊಂದಲೇ ಬೇಕು. ಯಾವ ವಸ್ತುವಿಗೆ ರೂಪವಿಲ್ಲವೋ ಅದೆಂದಿಗೂ ವಿಕಾರ ಹೊಂದದು, ಮತ್ತು ವಿನಾಶ ಹೊಂದದು. ಆ ವಸ್ತುವೇ ಪರವಸ್ತು. ಅದೇ ಪರಬ್ರಹ್ಮ. ಗಾಳಿ ಮತ್ತು ಆಕಾಶಗಳಿಗೆ ರೂಪವಿಲ್ಲ. ಅವುಗಳನ್ನು ಪರಬ್ರಹ್ಮವೆನ್ನಬಹುದೇ? ಗಾಳಿ ಮತ್ತು ಆಕಾಶ ಭೌತಿಕ ವಸ್ತುಗಳು. ಭೌತಿಕ ವಸ್ತುಗಳಿಗೆ ವಿಕಾರವುಂಟು ಇದು ಸನಾತನರ ಸಿದ್ಧಾಂತ. ಸ್ಥಾವರಕ್ಕಳಿವುಂಟು; ಜಂಗಮಕ್ಕಳಿವಿಲ್ಲ ಎಂಬ ಬಸವಣ್ಣನವರ ಉಕ್ತಿಯನ್ನು ಸ್ಮರಿಸುವುದು, ಇಲ್ಲಿ ಸಮಯೋಚಿತವಾದದ್ದು ಸ್ಥಾವರವೆಂದರೆ ಭೌತಿಕ ವಸ್ತು. ಜಂಗಮವೆಂದರೆ ಪರವಸ್ತು.

ಆಕರ್ಷಕ ರೂಪವನ್ನು ಧೀರ್ಘಾಯುಷ್ಯವನ್ನು ತರಬಲ್ಲ ಆಹಾರವನ್ನು 'ಸತ್ವ' ವುಳ್ಳ ಆಹಾರವೆಂದು ನಾವು ಕರೆಯುವಂತೆ, ಕಣ್ಣಿಗೆ ಕಾಣದ, ಕಾಲದ ಪರಿಮಿತಿಗೆ ಒಳಪಡದ, ಎಂದಿಗೂ ವಿಕಾರ ಹೊಂದದ, ಅತ್ತ ಇತ್ತ ಎನ್ನದೆ ಎತ್ತೆತ್ತಲೂ ಬೆರೆತು ಬೇಕಾಗದಿರುವ ವಿಶ್ವ ಚಾಲಕ ಶಕ್ತಿಯನ್ನು 'ಸತ್' ಎಂದೇ ಕರೆದರು ಉಪನಿಷತ್ತಿನ ಋಷಿಗಳು. ಆ ಮಹಾ ಶಕ್ತಿಯ ಶಾಶ್ವತವಾದ ಒಂದೂ ಮಹಾ ಚೇತನ ಅಂತಹ ಚೇತನ ಸುಧೆಯನ್ನು ಕನ್ನಡದ ಕಾಂತೆ, ಶೈವ ಕುಲ ಸಂಜಾತೆ ಅಕ್ಕ ಮಹಾದೇವಿ ಕಣ್ಣಾರೆ ಕಂಡಳು, ಕಂಡು ಸವಿದುಂಡಳು, ಉಂಡು ಮನ ತಣಿದಳು. ಋಷಿಗಳು ಯಾವುದನ್ನು 'ಸತ್' ಎಂದು ಕರೆದರೋ ಅದೇ ಶಿವ ಮತ್ತು ಅದೇ ಸೌಂದರ್ಯ. ಆ ಸತ್ಯ ಶಿವ ಸೌಂದರ್ಯಕ್ಕೆ ಅಕ್ಕನ ಮನ ಒಲಿಯಿತು. ಯೌವನದಲ್ಲಿದ್ದ ಕಟ್ಟು ಮಸ್ತಾಗಿದ್ದು ವಯಸ್ಸಾದಂತೆಲ್ಲಾ ವಿಕಾರ ಹೊಂದುವ ಮರ್ತ್ಯದ ಯಾವ ಗಂಡಸಿಗೂ ಒಲಿಯದೆ ರೂಹಿಲ್ಲದ ಕೇಡಿಲ್ಲದ ಚೆನ್ನಿಗನಾದ ಪನ್ನಗ ಭೂಷಣನಿಗೆ ಒಲಿದು ಅವನನ್ನೇ ವರಿಸಿ ಈ ಮಾನವ ಜನ್ಮದ ಸಾರ್ಥಕವನ್ನು ಪಡೆದಳು ಅಕ್ಕಮಹಾದೇವಿ.

# ಯುನಾನಿ ಚಿಕಿತ್ಸೆಯ ಪಿತಾಮಹ

—ಪ. ರಾಮಕೃಷ್ಣಶಾಸ್ತ್ರಿ

ಒಂದು ದಿನ ಬಾಗ್ದಾದಿನ ಅಮೀರ್ ಅಜೀದುದೌಲನ ದವಾಖಾನೆಯಲ್ಲಿ ಹುಡುಗನೊಬ್ಬ ನಿಂತುಕೊಂಡಿದ್ದ. ಬಂದಿದ್ದ ಒಬ್ಬ ರೋಗಿಗೆ ಅವನು ಔಷಧಿ ಕೊಡುವಾಗ ಇವನು ಪಕ್ಕನೆ ಮಧ್ಯೆ ಬಾಯಿ ಹಾಕಿ, "ಕ್ಷಮಿಸಿ! ತಾವು ಕೊಡುವ ಔಷಧಿ ಈ ರೋಗಕ್ಕೆ ಆಗಲಾರದು" ಎಂದ. ಅಮೀರ್ ಆಶ್ಚರ್ಯಪಟ್ಟ. ಇವನಾರು ಅಧಿಕ ಪ್ರಸಂಗಿ ಎಂದೆನಿಸಿದರೂ ಔಷಧಿಯನ್ನು ಪರೀಕ್ಷಿಸಿದ. ಆ ಹುಡುಗ ಹೇಳಿದ್ದು ಸತ್ಯವಾಗಿತ್ತು. ಔಷಧಿ ಅದಲು ಬದಲಾಗಿದ್ದುದು ನಿಜ. ಅಮೀರನು ಹುಡುಗನನ್ನು ತಬ್ಬಿಕೊಂಡು ಕೇಳಿದ, "ಯಾರಪ್ಪ ನೀನು, ದೇವರಂತೆ ಬಂದವನು?"

ಆ ಹುಡುಗ ಅಬೂಬಕ್ರ್ ಮಹಮದ್ ಬಿಕ್ರಿಯಾ. ಆತ ತನ್ನ ಪರಿಚಯವನ್ನು ಅಮೀರನಿಗೆ ಹೇಳಿ ತಾನು ಸ್ವಲ್ಪಮಟ್ಟಿಗೆ ವೈದ್ಯಶಾಸ್ತ್ರವನ್ನು ಕಲಿತಿರುವೆನೆಂದ. ಅಮೀರನಿಗೆ ಆನಂದವಾಯಿತು. ಅವನು ಈ ಬಾಲಕನನ್ನು ತರ್ಕ ಹಾಗು ಚಿಕಿತ್ಸಾ ಶಾಸ್ತ್ರಜ್ಞ ಅಲ್ ತಿಬರಿಯ ಬಳಿಗೆ ಪ್ರೌಢ ಶಿಕ್ಷಣಕ್ಕಾಗಿ ಕಳುಹಿಸಿ ಕೊಟ್ಟ ಅಲ್ಲಿ ಯಾವ ಕಾಯಿಲೆಯನ್ನು ನಿವಾರಿಸ ಬಲ್ಲಂತಹ ವೈದ್ಯ ಶಾಸ್ತ್ರ ಪ್ರೌಢಿಮೆ ಅವನಿಗೆ ಬಂತು. ಅವನು ಅನೇಕರಿಗೆ ಉಚಿತವಾಗಿ ಚಿಕಿತ್ಸೆ ಮಾಡಿದ.

ಜ್ಞಾನದ ತೃಷೆ ಬಿಕ್ರಿಯಾನಿಗೆ ಎಂದೂ ಹಿಂಗಲಿಲ್ಲ. ಆತ ಕಾಲ್ನಡಿಗೆಯಿಂದಲೇ ಜಗತ್ತಿನ ಮೂಲೆ ಮೂಲೆಗಳಲ್ಲೂ ಸಂಚರಿಸಿ ಅಮೂಲ್ಯವಾದ ಗಿಡಮೂಲಿಕೆಗಳನ್ನೂ ತಂತ್ರ, ಮಂತ್ರ ಗ್ರಂಥಗಳನ್ನೂ ಸಂಗ್ರಹಿಸಿದ. ಹೋದೆಡೆಯಲ್ಲೆಲ್ಲಾ ರೋಗಿದಳಿಗೆ ಉಚಿತ ಚಿಕಿತ್ಸೆ ನೀಡತೊಡಗಿದ. ಜೊತೆಗೆ ಆಹಾರ, ಪಥ್ಯಗಳನ್ನು ವಿಧಿಸುತ್ತಿದ್ದ ಕೊನೆಗೆ ಅವನು ಯುನಾನಿ ದೇಶದಲ್ಲೇ ನೆಲೆನಿಂತು ವೈದ್ಯವೃತ್ತಿಯನ್ನು ಕೈಗೊಂಡ.

ಒಮ್ಮೆ ಬಿಕ್ರಿಯಾ ಖುರಾಸಾನಿನ ಒಬ್ಬ ಅಮೀರನ ರೋಗ ಪರೀಕ್ಷೆ ಮಾಡಿ ಹಿಂತಿರುಗುತ್ತಿದ್ದ. ದಾರಿಯಲ್ಲಿ ಒಬ್ಬ ರೈತನು ಬಹುಕಾಲದಿಂದ ಹಾಸಿಗೆ ಹಿಡಿದಿದ್ದ ತನ್ನ ಮಗನನ್ನು ಪರೀಕ್ಷೆ ಮಾಡುವಂತೆ ಬೇಡಿಕೊಂಡ. ಬಿಕ್ರಿಯಾ ರೋಗಿಯನ್ನು ಪರೀಕ್ಷಿಸಿದ. ಅವನು ಬಳಲುತ್ತಿದ್ದುದು ಜಲೋದರ ರೋಗದಿಂದ. "ಇದನ್ನು ಗುಣಪಡಿಸಲು ಸಾಧ್ಯವಿಲ್ಲ" ಎಂದ ಬಿಕ್ರಿಯಾ. ಆದರೆ ರೈತ ಬಹುಪರಿಯಾಗಿ ಬೇಡಿಕೊಂಡ.

ತರುವಾಯ ಬಿಕ್ರಿಯಾ ಚಿಕಿತ್ಸೆಮಾಡಲೊಪ್ಪಿದರೂ "ನಾನು ಉಪಯೋಗಿಸುವ ಯಾವ ಔಷಧಿಗೂ ಆತಂಕ ಮಾಡಕೂಡದು" ಎಂದು ಷರತ್ತೊಡ್ಡಿದ. ರೈತ ಸಮ್ಮತಿಸಿದ, ಆಗ ಬಿಕ್ರಿಯಾ ಕಡಲೆ ಹಿಟ್ಟು, ಮೆಣಸು, ನೀರುಳ್ಳಿ, ಹುಣಸೇ ಹಣ್ಣು ಮೊದಲಾದ ಸಾಮಗ್ರಿಯನ್ನೆಲ್ಲಾ ಚೆನ್ನಾಗಿ ಅರೆದು ಅದಕ್ಕೆ ಕೃಷ್ಣ ಸರ್ಪದ ವಿಷವನ್ನು ಹಿಂಡಿದ. ಇದನ್ನು ನೋಡಿ ಥರಥರ ನಡುಗುತ್ತಿದ್ದ ರೋಗಿಗೆ ಈ ಔಷಧವನ್ನು ಬಲವಂತವಾಗಿ ತಿನ್ನಿಸಿದ.

ಕೊಂಚ ಹೊತ್ತಿನಲ್ಲಿ ರೋಗಿಗೆ ನಿದ್ರೆ ಬಂತು. ಮೈಯೆಲ್ಲ ಬೆವರಿನಿಂದ ತೊಯ್ದಿತ್ತು. ಅನೇಕ ಸಲ ಬೇಧಿಯಾಯಿತು. ಗುಡಾಣದಂತಹ ಹೊಟ್ಟೆಯೂ ತೆಳ್ಳಗಾಗಿ ಅವನು ಸಂಪೂರ್ಣ ನಿರೋಗಿಯಾಗಿಬಿಟ್ಟಿದ್ದ. ಆ ಬಡರೈತನಿಗೆ ಬಿಕ್ರಿಯಾನನ್ನು ಎಷ್ಟು ಅಭಿನಂದಿಸಿದರೂ ತೃಪ್ತಿಯಿಲ್ಲ.

ಒಬ್ಬ ಜಮೀನ್ದಾರನಿಗೆ ಉಗುಳಿನೊಂದಿಗೆ ರಕ್ತ ಬರುತ್ತಿತ್ತು, ಹಲವಾರು ವೈದ್ಯರ ಚಿಕಿತ್ಸೆಯಿಂದಲೂ ಅದು ಗುಣವಾಗಲಿಲ್ಲ. ಕಡೆಗೆ ಬಿಕ್ರಿಯಾ ಅವನನ್ನು ಪರೀಕ್ಷಿಸಲು ಹೋದ. ಜಮೀನ್ದಾರನಂತೂ ಬಂದಿರುವ ವ್ಯಾಧಿ ರಕ್ತಕ್ಷಯವೆಂದೇ ನಂಬಿ ಬದುಕುವ ಆಸೆಯನ್ನೇ ತೊರೆದಿದ್ದ. ಬಿಕ್ರಿಯಾ ಆತನ ದೇಹವನ್ನು ತಪಾಸಿಸಿ, "ನೀನು ಕೆಸುವಿನ ಎಲೆ ಹುಟ್ಟಿರುವ ನೀರು ಕುಡಿದಿರುವೆಯಾ ?" ಎಂದು ಕೇಳಿದ.

ಜಮೀನ್ದಾರ ತುಸುಹೊತ್ತು ಯೋಚಿಸಿದ. "ಕೆಲವು ತಿಂಗಳ ಹಿಂದೆ ಪ್ರವಾಸ ಹೋಗಿರುವಾಗ ಒಂದು ನಿರುಪಾಯ ಸಂದರ್ಭದಲ್ಲಿ ಕುಡಿದಿದ್ದೆ" ಎಂದ. ಬಿಕ್ರಿಯಾ ತಲೆದೂಗಿ, "ಆ ಕೆರೆಯೊಳಗಡೆ ಕನ್ನಡಿ ಹಾವೊಂದು ಕೊಳೆತಿತ್ತು. ಆ ನೀರಿನೊಂದಿಗೇ ಅದರ ಅಂಶವನ್ನು ಸೇವಿಸಿರುವುದರಿಂದ ಅದು ಹೊಟ್ಟೆಯಿಂದ ರಕ್ತವನ್ನು ಕಿತ್ತು ಹಾಕುತ್ತಿದೆ." ಎಂದು ಹೇಳಿ ಅವನಿಗೆ ವಾಂತಿಗೆ ಔಷಧಿ ಕೊಟ್ಟ ವ್ಯಾಧಿ ಗುಣವಾಯಿತು.

ಹೀಗೆ ಬಿಕ್ರಿಯಾ ಹಲವು ಕಡೆ ನಾನಾರೀತಿಯ ಚಿಕಿತ್ಸೆ ನಡೆಸಿದ. ಅರಬಸ್ತಾನದಲ್ಲಿ ಅವನು ಬರೆದ ವೈದ್ಯಕೀಯ ಗ್ರಂಥಗಳು ಸುಪ್ರಸಿದ್ಧವಾಗಿವೆ. ಅವನು ಯುನಾನ್ ದೇಶದಲ್ಲಿದ್ದುದರಿಂದ ಅವನ ಪದ್ಧತಿ 'ಯುನಾನಿ ಚಿಕಿತ್ಸಾಕ್ರಮ' ಎಂದು ಜಗತ್ಪ್ರಸಿದ್ಧವಾಗಿದೆ. ಇದಲ್ಲದೆ ಆತ ತರ್ಕಶ್ಯಾಸ್ತ್ರ, ಸಂಗೀತ, ಸಾಹಿತ್ಯ ಹಾಗೂ ಜೋತಿಷ್ಯ ಶಾಸ್ತ್ರದಲ್ಲಿಯೂ ಪ್ರಕಾಂಡ ಪಂಡಿತನಾದ. ಆತ ಬರೆದ 300 ಗ್ರಂಥಗಳು ಆ ವಿಷಯಗಳಲ್ಲಿ ವಿಶೇಷ ಜ್ಞಾನವನ್ನೊದಗಿಸುತ್ತವೆ.

ಹಿಜ್ರಿಶಕ 300 ರ ಸುಮಾರಿಗೆ ಈ ಪ್ರಸಿದ್ಧ ಚಿಕಿತ್ಸಕನು ತೀರಿಕೊಂಡ "ನನಗೆ ನೈಸರ್ಗಿಕವಾಗಿ ಸಾವು ಬಾರದು. ಅಂತಹ ಔಷಧಿಯನ್ನು ನಾನು ಸೇವಿಸಿದ್ದೇನೆ."

ಎಂದು ಅವನು ಹೇಳುತ್ತಿದ್ದ. ವಾಸ್ತವವಾಗಿ ಅವನು ಕೊಲಿಯಾದ. ಬಾಗ್ದಾದಿನ ಜರ್ ವಜೀರನನ್ನು ಒಂದು ದಿನ ತನ್ನ ಮನೆಗೆ ಔತಣಕ್ಕೆ ಆಹ್ವಾನಿಸಿದ. ಬಿಕ್ರಿಯಾನ್ ಹೆಂಡತಿ ಪಾಕಶಾಸ್ತ್ರ ಪ್ರವೀಣೆ ಅವಳು ತಯಾರಿಸಿದ ರುಚಿಕರ ಭೋಜನದ ಸವಿಗೆ ಮರುಳಾಗಿ ವಜೀರನು ತನ್ನ ಹೆಂಡತಿಗೂ ಅಂಥದೇ ಅಡಿಗೆ ಮಾಡಲು ಹೇಳಿದ. ಅವಳ ಅಡಿಗೆ ರುಚಿಕರವಾಗಲಿಲ್ಲ. ವಜೀರನ ಹೆಂಡತಿ, "ಬಿಕ್ರಿಯಾನ ಮನೆಯಲ್ಲಿ ಚಿನ್ನದ ಪಾತ್ರೆಯಿಂದ ಅಡಿಗೆ ಮಾಡುತ್ತಾರೆ. ಅದಕ್ಕೇ ಅಷ್ಟು ರುಚಿಕಟ್ಟು" ಎಂದು ಕಟಕಿಯಾಡಿದಳು.

ಬಿಕ್ರಿಯಾ ಬಂಗಾರ ತಯಾರಿಸುತ್ತಾನೆಂದು ವಜೀರ ಬಗೆದು, ಅವನೊಂದಿಗೆ ಬಂಗಾರ ತಯಾರಿಸುವ ಕಲೆಯನ್ನು ತನಗೆ ಹೇಳಿ ಕೊಡಲು ಬೇಡಿದ. ಅದನ್ನು ತಾನರಿಯೆನೆಂದು ಬಿಕ್ರಿಯಾ ಹೇಳಿದಾಗ ಅವನ ಕೊರಳು ಹಿಸುಕಿ ಕೊಂದ ವಜೀರ.

( 9 ನೇ ಪುಟದಿಂದ )
ತಿರುಗಿಸಿಕೊಂಡು ಹೋಗುವುದಾಗಲೀ, ಕಣ್ಣೆತ್ತಿಯೂ ನೋಡದೆ ರೀತಿಯಿಂದ ಸಾಗುವುದಾಗಲೀ, ತನಗೆ ಯಾರೂ ಗೊತ್ತಿಲ್ಲ, ಗೊತ್ತಿರಬೇಕಿಲ್ಲ ಎಂಬಂತೆ ಯಾಂತ್ರಿಕವಾಗಿ ಸಾಗುವುದಾಗಲೀ ಮಾನವೀಯ ನಡವಳಿಕೆಗೆ ತೀರ ಹೊರತಾದುದು ಎನ್ನಬೇಕಾಗುತ್ತದೆ. ಇತ್ತೀಚೆಗೆ ಜನಜೀವನದಲ್ಲಿ ಈ ಬಗೆಯ ಅಹಿತಕರ ವಾತಾವರಣ ದಟ್ಟವಾಗಿ ಹರಡುತ್ತಿದೆ. ಮಾನವ ಹೃದಯ–ಹೃದಯಗಳ ನಡುವೆ ದೊಡ್ಡ ಕಂದರಗಳು ಏರ್ಪಡುತ್ತಿವೆ ಮಾನವೀಯ ದೃಷ್ಟಿಯಿಂದ ಇದು ತೀರ ಅಹಿತಕಾರಿ ಎಂಬುದನ್ನು ಗಮನಿಸಬೇಕು.

ಇವನಾರವ, ಇದನಾರವ, ಇವನಾರವ ಎಂದೆನಿಸದಿರಯ್ಯಾ
ಇವ ನಮ್ಮವ, ಇವ ನಮ್ಮವ, ಇವ ನಮ್ಮವ ಎಂದೆನಿಸಯ್ಯಾ

ಎಂದು ಕೋರಿದರು ಬಸವಣ್ಣನವರು. ಎಲ್ಲರನ್ನು ಪ್ರೀತಿ, ಅಂತಃಕರಣಗಳಿಂದ ಅಪ್ಪಿಕೊಂಡು ಸಹಬಾಳ್ವೆ ನಡೆಸುವ ಹಿರಿಯಾಸೆ ಅವರದು ; ವಿಶ್ವವೇ ಒಂದು ಮನೆ, ಮಾನವರೆಲ್ಲಾ ಸೋದರರೆಂಬ, ವಿಶಾಲ ಹೃದಯ ಅವರದು. ತಾನುಂಟೋ ಮೂರು ಲೋಕವುಂಟೋ ಎಂದು ಸ್ವಾರ್ಥಿಯಾಗಿ ಬದುಕುವುದಕ್ಕಿಂತ ತನ್ನಂತೆ ಪರರ ಬಗೆದು, ಮಾನವ ಸಹಜ ಅಂತಃಕರಣದಿಂದ ಇತರರೊಡನೆ ಸೌಹಾರ್ದದಿಂದ ಬಾಳುವುದು ಬಹಳ ಮುಖ್ಯ ಎಂಬುದು ಅವರ ಆಶಯ.

ನೆರೆಹೊರೆಯವರೊಡನೆ ಸೌಹಾರ್ದದಿಂದಿರಬೇಕೆಂದರೆ ಅವರ ಸಂಸಾರದ ಕಷ್ಟಗಳಿಗೆ ನಾವು ಹೊಣೆಯಾಗಬೇಕೆಂದಲ್ಲ. ಅವರ ಬಗ್ಗೆ ಕಾಳಜಿ ವಹಿಸುವುದೆಂದರೆ ಆರ್ಥಿಕ ನೆರವು ನೀಡುವುದೆಂದೇನೂ ಅರ್ಥವಲ್ಲ. ಕಷ್ಟದಲ್ಲಿರುವ ಒಬ್ಬನಿಗೆ ನಮ್ಮ ಒಂದು ವಿಶ್ವಾಸದ ಮಾತು ದೊಡ್ಡ ಊರೆಗೋಲಾಗುತ್ತದೆ ; ಅದು ಬಾಳನ್ನು ಎದುರಿಸುವ ಶಕ್ತಿಯನ್ನು ನೀಡುತ್ತದೆ. ನಾನು ಒಂಟಿಯಲ್ಲ. ನನ್ನ ಕಷ್ಟದಲ್ಲಿ ಪಾಲ್ಗೊಳ್ಳುವ ನೆರೆಹೊರೆ ನನಗಿದೆ ಎಂಬ ನಂಬಿಕೆಯೊಂದರಿಂದಲೇ ಅದನ್ನು ನಿಭಾಯಿಸಲು ಅಗತ್ಯವಾದ ಚೈತನ್ಯ ಕೂಡಿ ಬರುತ್ತವೆ. ಕಷ್ಟವಾಗಲೀ ಸುಖವಾಗಲೀ ಹಂಚಿ ಉಣ್ಣುವ ಸಂಸ್ಕೃತಿಯ ಪರಂಪರೆಗೆ ಸೇರಿದವರು ನಾವು. ಕಷ್ಟವಾದರೆ ಇನ್ನೊಬ್ಬರಿಗೆ ಹೇಳಿ ಕಡಮೆ ಮಾಡಿಕೊಳ್ಳಬಹುದು ; ಸಂತೋಷವಾದರೆ ಇನ್ನೊಬ್ಬನಿಗೆ ಹೇಳಿ ಹೆಚ್ಚಿಸಿಕೊಳ್ಳಬಹುದು. ಅಂದಮೇಲೆ ನಮ್ಮ ಬದುಕಿನಲ್ಲಿ ನೆರೆಹೊರೆಯ ಪಾತ್ರ ಎಷ್ಟು ಹಿರಿದು ? ತನ್ನದೇನನ್ನೂ ಕಳೆದುಕೊಳ್ಳದೆ ಇನ್ನೊಬ್ಬನಿಗೆ ತೋರಬಹುದಾದ ಇಂಥ ಅಂತಃಕರಣವನ್ನು ತೋರಿಸದ ಮನುಷ್ಯನದು ಎಂಥ ಬದುಕು ? ತನ್ನ ಸಹಜೀವಿಗಳೊಂದಿಗೆ ಸಹ ಬಾಳ್ವೆಯನ್ನು ನಡೆಸುವಾಗ ಪರಸ್ಪರ ಸಹಕಾರ, ಮಾನವ ಸಹಜ ಅಂತಃಕರಣ, ಸರಸ ಸಜ್ಜನಿಕೆ, ಸೌಹಾರ್ದಗಳನ್ನು ಹೊಂದಿರುವುದು ನಾವು ಬದುಕನ್ನು ಸವಿಯಾಗಿಸಿಕೊಳ್ಳಲು, ಪೂರ್ಣವಾಗಿಸಿಕೊಳ್ಳಲು ತೀರ ಅನಿವಾರ್ಯವೆಂಬುದನ್ನು ಮನಗಾಣಬೇಕು. (ಆಕಾಶವಾಣಿ ಕೃಪೆಯಿಂದ)

( 10 ನೇ ಪುಟದಿಂದ )
ಸಮಯವನ್ನು ಮುಡುಪುಗೈದು ಸಲ್ಲಿಸಿದ ಸೇವೆಯಿಂದ ಈ ಭಾವನೆ ಒಡಮೂಡುತ್ತದೆ. ಹೀಗಾಗಿ ಪ್ರತಿ ವರ್ಷದಂತೆ ಈ ಭಾರಿಯು ಹಲವು ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದು ಹಿಂದಿನ ವರ್ಷಗಳಿಗಿಂತಲೂ ಅಧಿಕವಾಗಿ ಬಸವ ಜಯಂತಿಯ ಸಮಾರಂಭಗಳು ಜರುಗಿದುದು ಜನತೆಯಲ್ಲಿ ಧರ್ಮಜಾಗೃತಿಯ ಶುಭಸಂಕೇತವೆಂದು ಭಾವಿಸಬೇಕಾಗಿದೆ. ಪರಮ ಪೂಜ್ಯ ಶ್ರೀ ಶ್ರೀ ( ) ಸನ್ನಿಧಿಯವರ ಅಪ್ಪಣೆಯಂತೆ ಶ್ರೀ ಸಿದ್ಧಗಂಗಾ ಕ್ಷೇತ್ರದ ಭಕ್ತವೃಂದದವರು ಈ ಕೆಳಗೆ ನಮೂದಿಸಿರುವ ಸ್ಥಳಗಳಲ್ಲಿ ಶ್ರೀ ಜಗಜ್ಯೋತಿ ಬಸವೇಶ್ವರರ ಜಯಂತಿಯ ಉತ್ಸವವನ್ನು ಅನ್ಯನ್ಯ ಭಕ್ತಿ ಹಾಗೂ ವಿಜೃಂಭಣೆಯಿಂದ ಏರ್ಪಡಿಸಿದ್ದರು. ಈ ಉತ್ಸವಗಳಲ್ಲಿ ಅನೇಕ ಮಂದಿ ಮಠಾಧಿಪತಿಗಳು, ವಿದ್ವಾಂಸರು, ಗಮಕಿಗಳೂ, ಸಮಾಜ ಚಿಂತಕರೂ ಭಾಗವಹಿಸಿದ್ದು ಬಸವಣ್ಣನವರ ಜೀವನ ಸಂದೇಶ ವನ್ನು ಜನತೆಗೆ ತಿಳಿಸಿದರು. ದಿವಸಕ್ಕೆ ಎರಡು ಅಧಿವೇಶನಗಳು, ಬೆಳಗಿನ ಅಧಿವೇಶನ ಬೆಳಿಗ್ಗೆ 8-30 ರಿಂದ 11-30 ರ ವರೆಗೆ, ಮಧ್ಯಾಹ್ನ 12ಘಂಟೆಗೆ ಶ್ರೀ ಶ್ರೀಗಳವರಪಾದಪೂಜೆ, ಪ್ರಸಾದ ವಿನಿಯೋಗ ಮತ್ತು ಸಂಜೆ 3 ರಿಂದ 6 ಘಂಟೆಯವರೆಗೆ ಎರಡನೆಯ ಅಧಿವೇಶನ ಶ್ರೀ ಶ್ರೀಗಳವರ ಆಶೀರ್ವಚನದೊಂದಿಗೆ ಮುಕ್ತಾಯ. ರಾತ್ರಿ 9-00 ಘಂಟೆಗೆ ಶ್ರೀ ಕ್ಷೇತ್ರದ ಕಲಾವಿದರಿಂದ " ಶ್ರೀ ಜಗಜ್ಜ್ಯೋತಿ ಬಸವೇಶ್ವರ " ಎಂಬ ಭಕ್ತಿಪ್ರಧಾನವಾದ ನಾಟಕ ಅಭಿನಯಿಸಲ್ಪಟ್ಟಿತು. ಈ ಎಲ್ಲಾ ಕಾರ್ಯಕ್ರಮಗಳು ಶ್ರೀ ಶ್ರೀಗಳವರ ದಿವ್ಯ ಸಮ್ಮುಖದಲ್ಲಿಯೇ ನಡೆದುವು.

## ಉತ್ಸವ ನಡೆದ ಸ್ಥಳಗಳು

11-4-1981 ಶನಿವಾರ ಪುರ, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ. 14-4-1981 ಮಂಗಳವಾರ ಬಾಸೂರು, ಕಡೂರು ತಾಲ್ಲೂಕು, ಚಿಕ್ಕಮಂಗಳೂರು ಜಿಲ್ಲೆ. 17-4-1981 ಶುಕ್ರವಾರ ಕಲ್ಲುಮಠ, ಕೂಡ್ಲಿ ಪೇಟೆ, ಸೋಮವಾರ ಪೇಟೆ ತಾಲ್ಲೂಕು ಉತ್ತರ ಕೊಡಗು ಜಿಲ್ಲೆ. 21-4-1981 ಮಂಗಳವಾರ ಕರಿಮಣ್ಣೆ. ನೆಲಮಂಗಲ ತಾಲ್ಲೂಕು, ಬೆಂಗಳೂರು ಜಿಲ್ಲೆ. 23-4-1951 ಗುರುವಾರ ನೆಲಮಂಗಲ. 25-4-1981 ಶನಿವಾರ ಬ್ಯಾಲಕೆರೆ, ಮಾಗಡಿ ತಾಲ್ಲೂಕು, ಬೆಂಗಳೂರು ಜಿಲ್ಲೆ. 2-5-1981 ಶನಿವಾರ ಅಸಲೀಪುರ, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ. 5-5-1981 ಮಂಗಳವಾರ ಅಂಬಲಗೆರೆ, ದೊಡ್ಡಬಳ್ಳಾಪುರ ತಾ॥, ಬೆಂಗಳೂರು ಜಿಲ್ಲೆ. 9-5-1981 ಶನಿವಾರ ಚೇಳೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ. 13-5-1981 ಬುಧವಾರ ಕೆಸ್ತೂರು, ತುಮಕೂರು ತಾಲ್ಲೂಕು. 16-5-1981 ಶನಿವಾರ ಹೆಜ್ಜಾಜಿ, ದೊಡ್ಡಬಳ್ಳಾಪುರ ತಾ॥, ಬೆಂಗಳೂರು ಜಿಲ್ಲೆ. 18-5-1981 ಸೋಮವಾರ ಬೈಯಂಡಹಳ್ಳಿ, ನೆಲಮಂಗಲ ತಾ॥, ಬೆಂಗಳೂರು ಜಿಲ್ಲೆ. 20-5-1981 ಬುಧವಾರ ತರೂರು, ಸಿರಾ ತಾ॥, ತುಮಕೂರು ಜಿಲ್ಲೆ. 23-5-1981 ಶನಿವಾರ ಬೆಂಗಳೂರು, (ಶ್ರೀ ಗುರುಪಣ್ಣದೇವರ ಮಠ). 29-5-1981 ಶುಕ್ರವಾರ ಎಸ್. ಐ. ಟಿ. ತುಮಕೂರು.

LICENCED TO POST WITHOUT PRE PAYMENT LICENCE NO. 3
Registred with the Registrar of News papers for India under
No. 17139/69
Siddaganga Monthly Magazine Siddaganga Mutt.
Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.